KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜೂನ್ ೧೦, ೨೦೧೦ (ಜ್ಯೇಷ್ಠ ೨೦, ಶಕ ವರ್ಷ ೧೯೩೨) | ಸಂಚಿಕೆ ೨೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರ್ರಿ ರಸ್ತೆ, ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಆರ್/ಎಸ್‌ಒಆರ್/ಪಿಟಿಎನ್/280/2009–10 ದಿನಾಂಕ : 27–10–2009
2. ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಇ 143 ಸಸಂನೋ2009 ದಿನಾಂಕ 20–11–2009.
3. ಅಧ್ಯಕ್ಷರು, ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 08–12–2009ರ ಲಿಖಿತ ಹೇಳಿಕೆ.
4. ಸರ್ಕಾರದ ಪತ್ರ ಸಂಖ್ಯೆ : ಸಇ 143 ಸಸಂನೋ 2009 ದಿನಾಂಕ 07–01–2010.
5. ಸಹಕಾರ ಸಂಘಗಳ ನಿಬಂಧಕರು, ಸಹಕಾರ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಆರ್.ಸಿ.ಎಸ್/ಎ.ಡಿ.ಎಂ/208/ಎಸ್‌ಒಆರ್/2009–10 ದಿನಾಂಕ : 20–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪತ್ರದಲ್ಲಿ ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ಇದರ ಸದಸ್ಯರಾದ ಶ್ರೀ ಎಸ್. ತ್ರಿಲೋಕ್ ಚಂದ್ ರವರು ಸಂಘದಲ್ಲಿ ಕಾಲಕಾಲಕ್ಕೆ ಸರ್ವಸದಸ್ಯರ ಸಭೆಗಳನ್ನು ನಡೆಸಿ, ಲೆಕ್ಕಪುಸ್ತಕಗಳನ್ನು ಸಲ್ಲಿಸುತ್ತಿಲ್ಲವೆಂದು ಆರೋಪಿಸುತ್ತಾ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳಿಗೆ ದಿನಾಂಕ : 6–4–2009 ಮತ್ತು 9–4–2009ಗಳಂದು ದೂರು ಪತ್ರಗಳನ್ನು ಸಲ್ಲಿಸಿರುತ್ತಾರೆ. ಸದರಿ ದೂರು ಅರ್ಜಿಯಲ್ಲಿ ಆರೋಪಿಸಿರುವ ಅಂಶಗಳ ಬಗ್ಗೆ ಲಿಖಿತ ವಿವರಣೆಯನ್ನು ಸಲ್ಲಿಸುವಂತೆ ಸಂಘದವರಿಗೆ ದಿನಾಂಕ : 6–5–2009 ಮತ್ತು 5–6–2009 ಹಾಗೂ ಕಡೆಯದಾಗಿ ದಿನಾಂಕ : 5–9–2009 ಗಳಂದು ಪತ್ರ ಬರೆಯಲಾಗಿದ್ದು, ಆದರೂ ಸಹ ಸಂಘದಿಂದ ಯಾವುದೇ ವಿವರಣೆ ಸಲ್ಲಿಕೆಯಾಗಿರುವುದಿಲ್ಲ. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11(1) ರೀತ್ಯ ಸಂಘವು ಪ್ರತಿ ವರ್ಷ ಸರ್ವ ಸದಸ್ಯರ ಸಭೆಯನ್ನು ನಡೆಸಬೇಕಾಗಿದ್ದು, ಹಾಗೂ ಕಲಂ 13 ರೀತ್ಯ ಸಭೆಯಲ್ಲಿ ಅನುಮೋದನೆಗೊಂಡ ಲೆಕ್ಕಪತ್ರಗಳನ್ನು ಸರ್ವ ಸದಸ್ಯರ ಸಭೆ ನಡೆದ 14 ದಿನಗಳೊಳಗಾಗಿ ಸಂಘಗಳ ನೋಂದಣಾಧಿಕಾರಿಗಳ ಕಛೇರಿಯಲ್ಲಿ ದಾಖಲಿಸಬೇಕಾಗಿರುತ್ತದೆ. ಆದರೆ ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ಈ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11 ಮತ್ತು 13 ಗಳನ್ನು ಪಾಲನೆ ಮಾಡದಿರುವುದು ಕಂಡುಬಂದಿದ್ದು, ಹಾಗೂ ಕಲಂ 27(ಎ) ರೀತ್ಯ ಸಂಘಕ್ಕೆ ಆಡಳಿತಾಧಿಕಾರಿಗಳನ್ನು ನೇಮಿಸಬಹುದಾಗಿದ್ದು, ಅದರಂತೆ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಲು ಕೋರಿ ಪ್ರಸ್ತಾವನೆಯನ್ನು ಸಂಘಗಳ ನೋಂದಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರಲ್ಲಿ ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ಈ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11 ಮತ್ತು 13 ಗಳನ್ನು ಉಲ್ಲಂಘನೆ ಮಾಡಿರುವ ಬಗ್ಗೆ ತಿಳಿಸುತ್ತಾ, ಸಂಘದ ಹಿತದೃಷ್ಟಿಯಿಂದ ಹಾಗೂ ಸಂಘದ ಕೆಲಸಕಾರ್ಯಗಳು ಸುಸೂತ್ರವಾಗಿ ನಡೆಸಲು ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದು ದಿನಾಂಕ : 20–09–2009 ರಲ್ಲಿ ಕಾರಣ ಕೇಳುವ ನೋಟೀಸು ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಅಧ್ಯಕ್ಷರು, ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ : 8–12–2009ರ ಲಿಖಿತ ಹೇಳಿಕೆಯಲ್ಲಿ, ಸಂಘವು ಕ್ರಮಬದ್ಧವಾಗಿ ವಾರ್ಷಿಕ ಸರ್ವ ಸದಸ್ಯರ ಸಭೆಗಳನ್ನು ನಡೆಸುತ್ತಿದ್ದು, ಪ್ರತಿ ವರ್ಷದ ಲೆಕ್ಕಪತ್ರಗಳು ಆಡಿಟ್ ಮಾಡಿ ಸಾಮಾನ್ಯ ಸಭೆಯಲ್ಲಿ ಮಂಡಿಸಲಾಗುತ್ತಿದ್ದು, ಈ ದಾಖಲೆಗಳನ್ನು ಹೆಚ್ಚುವರಿ ನಗರ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯದಲ್ಲಿ ದಾಖಲಾಗಿರುವ ಓ.ಎಸ್. ನಂ. 7452/2001ರ ಸಂಬಂಧ ನ್ಯಾಯಾಲಯಕ್ಕೆ ಸಲ್ಲಿಸಿದೆ ಎಂದು ತಿಳಿಸುತ್ತಾ ಎರಡು ತಿಂಗಳ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ. ಸಾಮಾನ್ಯವಾಗಿ ಸಂಘದಲ್ಲಿ ವಾರ್ಷಿಕ ಸಭೆ ನಡೆಸಲು ಸದಸ್ಯರಿಗೆ ಕಳುಹಿಸಲು ಆಹ್ವಾನ ಪತ್ರಿಕೆ, ಲೆಕ್ಕಪತ್ರಗಳನ್ನು ಆಡಿಟ್ ಮಾಡಿ ಸಂಘದ ಸದಸ್ಯರು ಸಲ್ಲಿಸಲು ಪ್ರತಿಗಳನ್ನು ಮಾಡಿಸಲಾಗಿರುತ್ತದೆ. ಸಂಘ ಪ್ರತಿ ವರ್ಷ ಸರ್ವ ಸದಸ್ಯರ ಸಭೆಗಳನ್ನು ಕರೆದಿರುವುದರ ಮಾಹಿತಿ, ಲೆಕ್ಕಪತ್ರಗಳನ್ನು ಆಡಿಟ್ ಮಾಡಿಸಿದ ಪ್ರತಿ ಒದಗಿಸುವಂತೆ ಕ್ರಮ ಸಂಖ್ಯೆ : (4)ರ ಸರ್ಕಾರಿ ಪತ್ರದಲ್ಲಿ ಕೋರಿದ್ದರೂ ಸಹ ಸದರಿ ದಾಖಲೆಗಳನ್ನು ಒದಗಿಸದೇ ಮತ್ತೆ ಒಂದು ತಿಂಗಳ ಕಾಲಾವಕಾಶ ನೀಡುವಂತೆ ಕೋರಿರುತ್ತಾರೆ.

ಸಂಘದ ಅಧ್ಯಕ್ಷರು ಸಲ್ಲಿಸಿರುವ ಮನವಿಯನ್ನು ಗಮನಿಸಿದಲ್ಲಿ ಸಂಘದ ವಾರ್ಷಿಕ ಸರ್ವ ಸದಸ್ಯರ ಸಭೆಯನ್ನು ಕ್ರಮಬದ್ಧವಾಗಿ ನಡೆಸಿರುವುದಾಗಿ ಮತ್ತು ಪ್ರತಿ ವರ್ಷದ ಲೆಕ್ಕ ಪತ್ರಗಳನ್ನು ಆಡಿಟ್ ಮಾಡಿಸಿರುವುದಾಗಿ ತಿಳಿಸಿದ್ದು, ದಾಖಲೆಗಳನ್ನು ಒದಗಿಸಿರುವುದಿಲ್ಲ. ಇದು ಅನುಮಾನಾಸ್ಪದವಾಗಿರುವುದನ್ನು ಗಮನಿಸಿ, ಸಂಘದ ಅಧ್ಯಕ್ಷರು ಸಲ್ಲಿಸಿರುವ ಪತ್ರಗಳನ್ನು ಸಹಕಾರ ಸಂಘಗಳ ನಿಬಂಧಕರಿಗೆ ಕಳುಹಿಸಿ, ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರ ಪ್ರಕಾರ ಆಡಳಿತಾಧಿಕಾರಿಗಳನ್ನು ನೇಮಿಸುವ ಬಗ್ಗೆ ನಿರ್ದಿಷ್ಟ ಅಭಿಪ್ರಾಯವನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರಿಗೆ ದಿನಾಂಕ : 1–3–2010 ರಂದು ಪತ್ರ ಬರೆಯಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (4)ರ ಸಹಕಾರ ಸಂಘಗಳ ನಿಬಂಧಕರು, ಸಹಕಾರ ಇಲಾಖೆ, ಬೆಂಗಳೂರು ಇವರ ದಿನಾಂಕ : 20–3–2010ರ ಪತ್ರದಲ್ಲಿ, ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ಈ ಸಂಘದವರು ಕಾಲಕಾಲಕ್ಕೆ ಸರ್ವ ಸದಸ್ಯರ ಸಭೆಗಳನ್ನು ನಡೆಸಿ, ಲೆಕ್ಕಪತ್ರಗಳನ್ನು ಸಲ್ಲಿಕೆ ಮಾಡುತ್ತಿಲ್ಲವೆಂಬ ಬಗ್ಗೆ ಸಂಘದ ಸದಸ್ಯರಾದ ಶ್ರೀ ಎಸ್. ತ್ರಿಲೋಕ್ ರವರು ಆರೋಪಿಸಿದ್ದು, ಸದರಿ ಆರೋಪಗಳಿಗೆ ಸಮಜಾಯಿಷಿ ನೀಡಲು ಸಂಘದವರಿಗೆ ಲಿಖಿತ ಸೂಚನೆ ನೀಡಿದಾಗ್ಯೂ ವಿಫಲರಾಗಿರುವುದರಿಂದ, ಸದರಿ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರನ್ವಯ ಆಡಳಿತಾಧಿಕಾರಿಯನ್ನು ನೇಮಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಎಲ್ಲ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮೇಲ್ಕಂಡ ನ್ಯೂನತೆಗಳು ಇವೆ ಎಂದು ಕಂಡು ಬರುವುದರಿಂದ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಇ 143 ಸಸಂನೋ 2009, ಬೆಂಗಳೂರು, ದಿನಾಂಕ : 29–03–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ–1, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 981

**(ನಂಜುಂಡಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ವಿಜ್ಞಾನ ಇಂಜಿನಿಯರಿಂಗ್ ಮತ್ತು ವೈದ್ಯಕೀಯದ ಶ್ರೇಷ್ಠ ಕೇಂದ್ರಗಳು ಮತ್ತು ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳ ಸ್ಥಾಪನೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ : ವಿಯಇ 33 ವಿತ್ರಮ 2009, ದಿನಾಂಕ : 13-07-2009

2. ದಿನಾಂಕ : 28-5-2009 ಮತ್ತು 21-08-2009ರಂದು ವಿ.ತಂ.ದಾ.ಸ ದ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆದ 3 ಮತ್ತು 4ನೇ ಸಭೆಯ ನಡವಳಿ.

3. ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿ.ತಂ.ದಾ.ಸ ಇವರ ಪತ್ರ ಸಂ. ವಿ.ತಂ.ದಾ.ಸ/ಸಿ.ಇ.ಎಸ್.ಇ.ಎಮ್/15-16/01, ದಿನಾಂಕ : 27-01-2010.

4. ಸರ್ಕಾರದ ಆದೇಶ ಸಂಖ್ಯೆ : ವಿಯಇ 23 ವಿತ್ರಮ 2010, ದಿನಾಂಕ : 25-01-2010.

5. ಸರ್ಕಾರದ ಆದೇಶ ಸಂಖ್ಯೆ : ವಿಯಇ 24 ವಿತ್ರಮ 2010, ದಿನಾಂಕ : 25-01-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದ ಹೊಸ ಯೋಜನೆಯಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಯೋಜನೆಗಳಿಗಾಗಿ 2009-10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425-60-600-0-02(ಯೋ) ಇದರಡಿಯಲ್ಲಿ ಒಟ್ಟು ರೂ. 10.00 ಕೋಟಿಗಳ ಅನುದಾನವನ್ನು ಕಲ್ಪಿಸಲಾಗಿದ್ದು, ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ (2)ರಲ್ಲಿ ದಿನಾಂಕ : 28-05-2009 ಮತ್ತು 21-08-2009ರಂದು ನಡೆದ 3 ಮತ್ತು 4ನೇ ವಿ.ತಂ.ದಾ. ಸಮೂಹದ ಸಭೆಯಲ್ಲಿ ವಿಜ್ಞಾನ, ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶ್ರೇಷ್ಠ ಕೇಂದ್ರಗಳನ್ನು Centers of Excellence in Science, Engineering and Medicine ಸ್ಥಾಪಿಸುವ ಬಗ್ಗೆ ಶಿಫಾರಸ್ಸು ಮಾಡಿ ಈ ಯೋಜನೆಯ ರೂಪುರೇಷೆಗಳನ್ನು ನಿರ್ಧರಿಸಲು ಒಂದು ಉಪ ಸಮಿತಿಯನ್ನು ನೇಮಿಸಿರುತ್ತದೆ, ಈ ಉಪ ಸಮಿತಿಯು ಸಲ್ಲಿಕೆಯಾದ ಅರ್ಜಿಗಳನ್ನು ಮೌಲ್ಯಮಾಪನಗೊಳಿಸಿ 2009-10ನೇ ಸಾಲಿಗೆ ತಲಾ 20.00 ಲಕ್ಷಗಳಂತೆ 5 ಕೇಂದ್ರಗಳನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿರುತ್ತದೆ. ಈ ಕೇಂದ್ರಗಳ ಸ್ಥಾಪನೆಗೆ ಬೇಕಾದ ಅನುದಾನವನ್ನು ಮೇಲೆ ಓದಲಾದ (3) ಮತ್ತು (4)ರಲ್ಲಿನ ಆದೇಶಗಳಲ್ಲಿ ರೂ. 140.00 ಲಕ್ಷಗಳ ಅನುದಾನವನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ.

ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವು ತಲಾ ರೂ. 10.00 ಲಕ್ಷದಂತೆ 10 ಕೇಂದ್ರಗಳಲ್ಲಿ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳ Centers of innovative Science Education ಸ್ಥಾಪನೆಗೆ ಮತ್ತೊಂದು ಯೋಜನೆಯನ್ನು ಶಿಫಾರಸ್ಸು ಮಾಡಿದ್ದು, ಇದಕ್ಕಾಗಿ ಒಂದು ಉಪ ಸಮಿತಿಯನ್ನು ರಚಿಸಿರುತ್ತದೆ. ಈ ಉಪ ಸಮಿತಿಯು ಆಸಕ್ತ ಸಂಸ್ಥೆಗಳಿಂದ ಸಲ್ಲಿಸಿದ ಅರ್ಜಿಗಳನ್ನು ಮೌಲ್ಯಮಾಪನಗೊಳಿಸಿ ಗುಣಮಟ್ಟದ ಅರ್ಜಿಗಳ ಕೊರತೆಯಿಂದಾಗಿ ಕೇವಲ 4 ಸಂಸ್ಥೆಗಳನ್ನು ಮಾತ್ರ ಆಯ್ಕೆ ಮಾಡಿರುತ್ತದೆ. ಆದ್ದರಿಂದ, Centers of Excellence in Science, Engineering and Medicine ಸ್ಥಾಪಿಸುವ ಬಗ್ಗೆ ಪ್ರಸಕ್ತ ಸಾಲಿಗೆ ಒದಗಿಸಿರುವ ರೂ. 100.00 ಲಕ್ಷಗಳ ಅನುದಾನದಲ್ಲಿ 5 ಕೇಂದ್ರಗಳಿಗೆ ತಲಾ ರೂ. 20.00 ಲಕ್ಷಗಳಂತೆ ಅನುದಾನ ಒದಗಿಸಲು ಮತ್ತು Centers of innovative Science Education ಯೋಜನೆಯನ್ನು ಅನುಷ್ಠಾನಗೊಳಿಸಲು ಆಯ್ಕೆಯಾದ 4 ಸಂಸ್ಥೆಗಳಿಗೆ ತಲಾ 10.00 ಲಕ್ಷಗಳಂತೆ ಅನುದಾನ ನೀಡಲು ಅನುಮತಿ ನೀಡಬೇಕೆಂದು ಕಾರ್ಯನಿರ್ವಾಹಕ ಕಾರ್ಯದರ್ಶಿಯವರು ಸಲ್ಲಿಸಿರುವ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಅದೇಶ ಸಂಖ್ಯೆ : ವಿಯಇ 31 ವಿತ್ರಮ 2010, ಬೆಂಗಳೂರು, ದಿನಾಂಕ : 18ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ Centers of Excellence in Science, Engineering and Medicine ಸ್ಥಾಪಿಸಲು ತಲಾ ರೂ. 20.00 ಲಕ್ಷಗಳಂತೆ 5 ಶ್ರೇಷ್ಠ ವಿಜ್ಞಾನ, ಇಂಜಿನಿಯರಿಂಗ್ ಮತ್ತು ವೈದ್ಯಕೀಯದ ಕೇಂದ್ರಗಳನ್ನು ಸ್ಥಾಪಿಸಲು ಅನುಬಂಧ-1 ಹಾಗೂ Centers of innovative Science Education ಯೋಜನೆಯನ್ನು ಅನುಷ್ಠಾನಗೊಳಿಸಲು 4 ಸಂಸ್ಥೆಗಳಿಗೆ ತಲಾ ರೂ. 10.00 ಲಕ್ಷಗಳಂತೆ ಅನುಬಂಧ 2 ರಲ್ಲಿ ನಮೂದಿಸಿರುವಂತೆ ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳನ್ನು ಸ್ಥಾಪಿಸಲು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಇವರಿಗೆ ಬಿಡುಗಡೆ ಮಾಡಲಾದ ರೂ. 140.00 ಲಕ್ಷಗಳ ಅನುದಾನದಲ್ಲಿ ಭರಿಸಲು ಅನುಮೋದನೆ ನೀಡಿ ಅದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಅನುಬಂಧ–2**

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 31 ವಿತ್ರಮ 2010, ದಿನಾಂಕ : 18–03–2010**

| Sl. No. | Name of the **Principal** College Name and Address | Amount recommended by the committee for 2009-10 (Rs. In lakhs) |
|---|---|---|
| 1. | Dr. B.A. Kagali<br>Chairman, Department of Physics,<br>Bangalore University, Jnanabharathi,<br>Bangalore-56<br>Ph : 080-22961471<br>Fax : 080-23219295 | 10.00 |
| 2. | Dr. Ajith Prasad<br>Principal Grade-I<br>JSS College, Vidyagiri, Dharwad-580004<br>Ph : 0836-2468478<br>Fax : 0836-2462200<br>E-mail : Dr. ajithprasad@rediffmail.com | 10.00 |
| 3. | Dr. Yashovarma<br>Principal, Shri Dharmasthala Manjunatheswara College<br>Ujire (Autonomous) SDM College<br>Ujire-574240<br>Ph : 08256-236221<br>Fax : 08256-236220<br>Email : sdmcollege@rediffmail.com | 10.00 |
| 4. | Dr. R. Maregoud<br>Principal, Vijayanagar College, Hospet<br>Affiliated to Gulbarga University, Gulbarga<br>Ph : 08394-228431<br>Fax : 08394-228474<br>Email : vnchospet@yahoo.in | 10.00 |
| | Total | 40.00 |

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಅನುಬಂಧ-1

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 31 ವಿತ್ರಮ 2010, ದಿನಾಂಕ : 18-03-2010**

| Sl. No. | Name of the Principal College Name and Address | Amount recommended by the committee for 2009-10 (Rs. In lakhs) |
|---|---|---|
| 1. | Dr. S. Badami<br>Sree Siddaganga College of Pharmacy<br>BM Road, Tumkur-572 102<br>Ph : +91-0816-2273331 (O)<br>Fax : +91-816-2252792<br>E-mail : directorsscp@gmail.com | 20.00 |
| 2. | Dr. Pramod B.Ghai<br>Department of Applied Genetics<br>Karnataka University, Pavate Nagar<br>Dharwad-580 003<br>Ph : +91-836-22155350<br>Fax : +91-836-2215350<br>Email : pramodbgai@gmail.com | 20.00 |
| 3. | Dr. M.L. Satyanarayana<br>Professor & Head of the Department, Pathology<br>Veterinary College, Hebbal, Bangalore-24<br>Ph : +91-80-23411483-ext 203<br>Fax : +91-80-23410509<br>E-mail : mlspathology@yahoo.com | 20.00 |
| 4. | Dr. B.N. Keshavan<br>Professor & Head of the Department, Electrical & Electronics Engineering<br>PES Institute of Technology, 100ft. Ring Road<br>BSSK 3rd Stage, Bangalore-560 085<br>Ph : 080-26721983/2108<br>Fax : 080-26720886<br>Website : www.pes.edu | 20.00 |
| 5. | Dr. K.V.S. Ananda Babu<br>CMR Institute of Technology<br># 132, AECS Layout, ITPL Road<br>Kundalahalli, Bangalore-560 037 | 20.00 |
| | Total | 100.00 |

ಪಿ.ಆರ್. 982

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**CHIEF SECRETARY TO GOVERNMENT**

**Sub :** Regulatory framework for dealing with unauthorixed constructions of Temple, Churches, Mosques and Gurudwaras, which have come up in the State Prior to 07-12-2009 and also the Policy of not permitting unauthorized religious structures coming up on Public Roads, Public Parks, and other Public Places in terms of the interim order of the Hon'ble Supreme Court of India in Special Leave to Appeal (Civil) No. 8519/2006, dated 07-12-2009.

**Preamble:**

In the background of the Supreme Court's interim directions, in the Special Leave to Appeal (Civil) No.2519/2006, dated 07-12-2009, it is imperative, that certain guidelines have to be formulated in effectively implementing the orders of the Highest Court of the land. Hence, this policy.

Of late there is an increasing tendency, almost competitive, amongst the various religious groups to encroach upon public roads, public parks, and other public places, like on storm water drains, on the retaining walls constructed to protect the elevated roads etc., and build Temples, Churches, Mosques and Gurudwaras, thereon.

Often times, this has resulted in Public nuisance by way of causing inconvenience in terms of slowing down of traffic, of public as well as Private Vehicles, and disturbing the attention of the General Public in addition to spoiling the tranquility of the parks and several other public places. Sometimes these structures have led to communal clashes, disturbing the social equilibrium in Villages, Towns and big Cities. Hence, the Hon'ble Supreme Court of India has intervened in this matter to put a stop in such activities, by urging the State Governments and their machinery to tighten up the enforcement measures to ensure that no such unauthorized religious structures are allowed to come up, anywhere in the State. Hence the following Order:

**Government Order No. HD 504 SST 2008(P), Bangalore, Dated 17th February 2010.**

Under the circumstances explained above, the State Government has formulated the following guidelines for protecting the Public Roads, Public Parks and other Public Places from encroachment.

1) It is directed that with effect from 07-12-2009, the Deputy commissioners and District magistrates shall ensure that no unauthorized religious Places of Worship like Temples, Churches, Mosques, Gurudwaras etc., come up on Public Roads, Public Parks and other Public Places.

2) If, it comes to the notice of the State Government that in spite of these guidelines any such unauthorized structures have come up, the concerned Deputy Commissioners cum District Magistrate will be personally held responsible and Disciplinary Action would be taken against them.

3) In respect of the areas coming under the jurisdiction of Local bodies, both Rural and Urban, the respective Commissioners/Chief Officers of the Urban Zilla panchayats Local Bodies as well as the Chief Executive Officers of the Taluk Panchayats and the Zilla Panchayats would also be held personally accountable and disciplinary action would be taken against them also.

4) The following guidelines are to be followed in respect of unauthorized religious structures which have come up before 07-12-2009.

   i) If such structures have come up on Roads, including major or minor Roads, in the Cities, Towns and Villages they shall be summarily demolished by asking the

community leaders to shift the Idols/Relics to any other area other than Public Roads, Public Parks and other Public Places.

ii) The unauthorized structures, which have come up, on storm water drains, and the retaining walls etc., shall be summarily demolished.

iii) However, in respect of unauthorized structures, which have come up in Public Parks and other public places Deputy commissioners cum District Magistrates will have to take up the review of these cases, on a case to case basis. If in the opinion of Deputy Commissioners cum district Magistrates the location of the structure is such that it does not spoil the peace and tranquility of the area, they may perhaps be regularized, subject to their compliance with the Acts like KTCP Act, Municipalities Act, Corporation Act and other local laws.

iv) In case more than one community have put up the religious structures in Parks or other Public Places which may lead to an atmosphere of intolerance and clashes between the two, then both the unauthorized constructions will have to be demolished.

v) The position obtaining on the ground, in every district shall be reviewed, at an interval of once in three months, by the District Level Committee, comprising of the following:

a) Deputy Commissioner and District Magistrate- Chairpersons.

b) The Commissioner of the Mahanagara Palikas/Chief Executive Officer of the Zilla Panchayat/ Commissioners of the city Municipal Council/Town Municipal councils/Chief Officers of Town Panchayat;Taluka Executive Officers of the Taluka Panchayats – Members.

c) Superintendent of Polic of the District – Member.

d) Executive Engineer, PWD – Member.

e) Executive Engineer Zilla Panchayat – Member.

f) Commissioner of the Urban Development Authority – Member

g) Additional District Commissioner/Additional District Magistrate – Member Convener.

vi) The Deputy Commissioners cum District Magistrate shall send a quarterly report in the Statement appended to the guidelines so as to reach the office of the Additional Chief Secretary (Home) in the first week of the month, following the quarter ending month.

5. In future, whenever the Urban Local Bodies/ Rural Local bodies go in for formation of new residential layout, they shall always earmark in the plans, suitable place in the layout, for construction of Temples, Churches, Mosques, Gurudwaras etc., as the case may be.

6. These Plans will have to be vetted by the Deputy Commissioners and District Magistrate to ensure that the places reserved in the plan are so located, that there is no scope for different community members to complain that environment of peace and tranquility which is important for the conduct of prayers is disturbed.

7. Since the Hon'ble Supreme Court of India has directed that the Period within which all the processes of removing/relocating/regularizing the unauthorized constructions, should be clearly indicated, it is hereby directed that all Deputy Commissioners/District Magristrate's will ensure that all the processes with regard to removal/relocation/regularization of these

unauthorized constructions on a case to case basis has to be completed by 31-12-2010 by placing them before the District Committees as explained in the foregoing paragraphs.

8. It is once again impressed upon the Deputy Commissioners and district Magistrates that all the processes shall be completed before 31-12-2010. They must ensure that no scope is given for violation of these instructions, which would be viewed seriously.

By Order and in the name of the Governor of Karnataka,
**S.V. RANGANATH**
Chief Secretary to Government

**ಸರ್ಕಾರದ ಮುಖ್ಯ ಕಾರ್ಯದರ್ಶಿ**

**ವಿಷಯ :** ಭಾರತದ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಸ್ಪೆಷಲ್ ಲೀವ್ ಟು ಅಪೀಲ್ (ಎಸ್.ಎಲ್.ಪಿ.) ಸಂಖ್ಯೆ: 8519/2006ರಲ್ಲಿ ದಿನಾಂಕ 07–12–2009ರಂದು ನೀಡಿರುವ ಮಧ್ಯಂತರ ಆದೇಶದಂತೆ, ದಿನಾಂಕ 07–12–2009ರ ನಂತರ ರಾಜ್ಯದ ಯಾವುದೇ ಸಾರ್ವಜನಿಕ ಉದ್ಯಾನವನಗಳಲ್ಲಿ, ಸಾರ್ವಜನಿಕ ರಸ್ತೆಗಳಲ್ಲಿ ಹಾಗೂ ಇತರೆ ಸಾರ್ವಜನಿಕ ಪ್ರದೇಶಗಳಲ್ಲಿ ದೇವಾಲಯ, ಮಸೀದಿ, ಕ್ರೈಸ್ತ ದೇವಾಲಯ, ಗುರುದ್ವಾರ, ಮುಂತಾದ ಧಾರ್ಮಿಕ ಕಟ್ಟಡಗಳು ತಲೆ ಎತ್ತದಂತೆ ನಿಯಂತ್ರಿಸುವ ಹಾಗೂ ದಿನಾಂಕ 07–12–2009ಕ್ಕೆ ಪೂರ್ವದ ಅವಧಿಯಲ್ಲಿ ಅನಧಿಕೃತವಾಗಿ ನಿರ್ಮಿಸಲಾದ ಇಂತಹ ಕಟ್ಟಡಗಳ ಬಗ್ಗೆ ತೆಗೆದುಕೊಳ್ಳಬೇಕಾದ ನಿರ್ಣಯವನ್ನು ನಿರ್ಧರಿಸುವ ನಿಟ್ಟಿನಲ್ಲಿ ಮಾರ್ಗಸೂಚಿಯನ್ನು ರಚಿಸಿ ಇದರ ಪಾಲನೆಯ ಬಗ್ಗೆ.

**ಪ್ರಸ್ತಾವನೆ :**

ದಿನಾಂಕ 07–12–2009ರ ಎಸ್.ಎಲ್.ಪಿ. (ಸಿವಿಲ್) ಸಂಖ್ಯೆ: 2519/2006ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಮಧ್ಯಂತರ ಆದೇಶದಲ್ಲಿ ನೀಡಿರುವ ನಿರ್ದೇಶನಗಳ ಹಿನ್ನೆಲೆಯಲ್ಲಿ ಕೆಲವೊಂದು ಮಾರ್ಗಸೂಚಿಗಳನ್ನು ಸಿದ್ಧಪಡಿಸಿ ಅವುಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದು ಅನಿವಾರ್ಯವಾಗಿದೆ. ಆದುದರಿಂದ ಈ ಕಾರ್ಯನೀತಿ.

ಸಾರ್ವಜನಿಕ ರಸ್ತೆಗಳನ್ನು, ಸಾರ್ವಜನಿಕ ಉದ್ಯಾನವನಗಳನ್ನು ಹಾಗೂ ಮಳೆ ನೀರು ಚರಂಡಿಗಳನ್ನು, ಎತ್ತರದಲ್ಲಿರುವ ರಸ್ತೆಗಳ ರಕ್ಷಣೆಗಾಗಿ ನಿರ್ಮಿಸಲಾದ ತಡೆಗೋಡೆಗಳಂತಹ ಇತರೆ ಸಾರ್ವಜನಿಕ ಸ್ಥಳಗಳನ್ನು ಅತಿಕ್ರಮಿಸಿ ವಿವಿಧ ಧಾರ್ಮಿಕ ಗುಂಪುಗಳು ದೇವಾಲಯ, ಮಸೀದಿ, ಕ್ರೈಸ್ತ ದೇವಾಲಯ, ಗುರುದ್ವಾರ, ಮುಂತಾದ ಧಾರ್ಮಿಕ ಕಟ್ಟಡಗಳನ್ನು ಸ್ಪರ್ಧಾತ್ಮಕ ರೀತಿಯಲ್ಲಿ ನಿರ್ಮಿಸುತ್ತಿರುವ ಪರಿಪಾಠವು ಇತ್ತೀಚೆಗೆ ಹೆಚ್ಚಾಗುತ್ತಿದೆ.

ಇದೀಗ ಸಾರ್ವಜನಿಕ ಪಿಡುಗಾಗಿ ಪರಿಣಮಿಸಿದ್ದು ಸಾರ್ವಜನಿಕ ಹಾಗೂ ಖಾಸಗೀ ವಾಹನಗಳ ಸಂಚಾರಕ್ಕೆ ತಡೆಯೊಡ್ಡಿ ತೊಂದರೆಯನ್ನುಂಟುಮಾಡುವುದಲ್ಲದೆ. ಚಾಲನೆಯನ್ನು ನಿಧಾನ ಗೊಳಿಸುತ್ತಿದ್ದು, ಸಾರ್ವಜನಿಕರ ಗಮನ ಸೆಳೆದು ತೊಂದರೆಯೊಡ್ಡುವ ಜೊತೆಗೆ ಸಾರ್ವಜನಿಕ ಉದ್ಯಾನವನಗಳ ಮತ್ತು ಇತರೆ ಸಾರ್ವಜನಿಕ ಸ್ಥಳಗಳ ಪ್ರಶಾಂತತೆಗೆ ಧಕ್ಕೆಯನ್ನುಂಟುಮಾಡುತ್ತಿದೆ. ಇಂತಹ ನಿರ್ಮಾಣಗಳಿಂದಾಗಿ ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ ಹಾಗೂ ಬೃಹತ್ ನಗರ ಪ್ರದೇಶಗಳಲ್ಲಿ ಕೆಲವಾರು ಕೋಮುಗಲಭೆಗಳು ಉದ್ಭವಿಸಿದ್ದು, ಸಾಮಾಜಿಕ ಸಾಮರಸ್ಯಕ್ಕೆ ಧಕ್ಕೆಯನ್ನುಂಟುಮಾಡುತ್ತಿದೆ. ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಈ ವಿಚಾರದಲ್ಲಿ ಮಧ್ಯಪ್ರವೇಶಿಸಿ ಇಂತಹ ಚಟುವಟಿಕೆಗಳನ್ನು ತಡೆಯುವ ದೃಷ್ಟಿಯಿಂದ ಮತ್ತು ರಾಜ್ಯದ ಯಾವುದೇ ಪ್ರದೇಶದಲ್ಲಿ ಅನಧಿಕೃತವಾಗಿ ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದ ಕಟ್ಟಡಗಳು ಅಥವಾ ನಿರ್ಮಾಣಗಳು ಎದ್ದೇಳದಂತೆ ಮುನ್ನೆಚ್ಚರಿಕೆ ವಹಿಸಿ ಮಧ್ಯಂತರ ಆದೇಶದಲ್ಲಿ ನೀಡಿರುವ ಸೂಚನೆಗಳನ್ನು ರಾಜ್ಯ ಸರ್ಕಾರಗಳು ಮತ್ತು ಕಾನೂನು ಜಾರಿಗೊಳಿಸುವ ಆಡಳಿತಾಂಗವು ಕಟ್ಟುನಿಟ್ಟಾಗಿ ಪಾಲಿಸುವಂತೆ ಸೂಚಿಸಿದೆ. ಅದರಂತೆ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 504 ಎಸ್‌ಎಸ್‌ಟಿ 2008 (ಭಾ), ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ರಸ್ತೆಗಳನ್ನು, ಸಾರ್ವಜನಿಕ ಉದ್ಯಾನವನಗಳನ್ನು ಹಾಗೂ ಇತರೆ ಸಾರ್ವಜನಿಕ ಸ್ಥಳಗಳನ್ನು ಅತಿಕ್ರಮಣದಿಂದ ಕಾಪಾಡುವ ಸಲುವಾಗಿ ರಾಜ್ಯ ಸರ್ಕಾರವು ಕೆಳಕಂಡ ಮಾರ್ಗಸೂಚಿಯನ್ನು ರೂಪಿಸಿದೆ:

1. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳು ದಿನಾಂಕ 07–12–2009ರ ನಂತರದ ಅವಧಿಯಲ್ಲಿ ಸಾರ್ವಜನಿಕ ರಸ್ತೆಗಳಲ್ಲಿ, ಸಾರ್ವಜನಿಕ ಉದ್ಯಾನವನಗಳಲ್ಲಿ ಹಾಗೂ ಇತರೆ ಸಾರ್ವಜನಿಕ ಸ್ಥಳಗಳಲ್ಲಿ ಯಾವುದೇ ಅನಧಿಕೃತ ಪ್ರಾರ್ಥನಾ ಕೇಂದ್ರಗಳಂತಹ ದೇವಾಲಯ, ಮಸೀದಿ, ಕ್ರೈಸ್ತ ದೇವಾಲಯ, ಗುರುದ್ವಾರ, ಮುಂತಾದ ಧಾರ್ಮಿಕ ಕಟ್ಟಡಗಳು ತಲೆ ಎತ್ತದಂತೆ ನೋಡಿಕೊಳ್ಳುವುದು.

2. ಈ ಮಾರ್ಗಸೂಚಿಯ ನಂತರ, ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದಂತೆ ಯಾವುದೇ ಅನಧಿಕೃತ ಕಟ್ಟಡಗಳ ನಿರ್ಮಾಣವನ್ನು ಕೈಗೆತ್ತಿಕೊಳ್ಳಲಾಗಿದೆಯೆಂಬ ವಿಚಾರವು ರಾಜ್ಯ ಸರ್ಕಾರದ ಗಮನಕ್ಕೆ ಬಂದಲ್ಲಿ, ಜಿಲ್ಲಾಧಿಕಾರಿಗಳನ್ನು ಮತ್ತು ಜಿಲ್ಲಾ ದಂಡಾಧಿಕಾರಿಗಳನ್ನು ಅದಕ್ಕೆ ವೈಯಕ್ತಿಕವಾಗಿ ಜವಾಬ್ದಾರರನ್ನಾಗಿ ಮಾಡಲಾಗುವುದಲ್ಲದೆ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಜರುಗಿಸಲಾಗುವುದು.
3. ಗ್ರಾಮೀಣ ಮತ್ತು ನಗರ ಪ್ರದೇಶಗಳ ಸ್ಥಳೀಯ ಸಂಸ್ಥೆಗಳಾದ ನಗರ ಪಾಲಿಕೆ/ನಗರ ಸಭೆ/ಪುರಸಭೆ ಇವುಗಳ ಅಧಿಕಾರ ವ್ಯಾಪ್ತಿಗೆ ಬರುವ ಪ್ರದೇಶಗಳಿಗೆ ಸಂಬಂಧಿಸಿದಂತೆ ಅವುಗಳ ಆಯುಕ್ತರುಗಳನ್ನು ಮತ್ತು ಮುಖ್ಯಾಧಿಕಾರಿಗಳನ್ನು, ಗ್ರಾಮ ಪಂಚಾಯತ್‌ಗಳು, ತಾಲ್ಲೂಕು ಪಂಚಾಯತ್‌ಗಳು ಮತ್ತು ಜಿಲ್ಲಾ ಪಂಚಾಯತ್‌ಗಳ ಅಧಿಕಾರ ವ್ಯಾಪ್ತಿಯ ಪ್ರದೇಶಗಳಿಗೆ ಸಂಬಂಧಿಸಿದಂತೆ ಈ ಮಾರ್ಗಸೂಚಿಯ ಪಾಲನೆಯಲ್ಲಿ ಯಾವುದೇ ರೀತಿಯ ಲೋಪವುಂಟಾದಲ್ಲಿ ಕ್ರಮಬದ್ಧವಾಗಿ ಅವುಗಳ ಮುಖ್ಯ ಅಧಿಕಾರಿಗಳನ್ನು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳನ್ನು ವೈಯಕ್ತಿಕವಾಗಿ ಜವಾಬ್ದಾರರನ್ನಾಗಿ ಮಾಡಲಾಗುವುದಲ್ಲದೆ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಜರುಗಿಸಲಾಗುವುದು.
4. ದಿನಾಂಕ 07–12–2009ಕ್ಕಿಂತ ಮುಂಚಿತವಾಗಿ ಅನಧಿಕೃತವಾಗಿ ನಿರ್ಮಾಣಗೊಂಡಿರುವ ಪ್ರಾರ್ಥನಾ ಕೇಂದ್ರಗಳಂತಹ ಧಾರ್ಮಿಕ ಕಟ್ಟಡಗಳಿಗೆ ಸಂಬಂಧಿಸಿದಂತೆ ಕೆಳಕಂಡ ಮಾರ್ಗಸೂಚಿಗಳನ್ನು ಅನುಸರಿಸತಕ್ಕದ್ದು:
   - i) ಗ್ರಾಮೀಣ ಪ್ರದೇಶಗಳ, ಪಟ್ಟಣಗಳ ಮತ್ತು ನಗರಗಳ ರಸ್ತೆಗಳಲ್ಲಿ, ಪ್ರಮುಖ ಹಾಗೂ ಸಣ್ಣ ರಸ್ತೆಗಳೂ ಸೇರಿದಂತೆ, ಇಂತಹ ಯಾವುದೇ ಕಟ್ಟಡಗಳನ್ನು ನಿರ್ಮಿಸಲಾಗಿದ್ದಲ್ಲಿ, ಸದರಿ ಕಟ್ಟಡಗಳಲ್ಲಿ ಇರಿಸಲಾಗಿದ್ದ ವಿಗ್ರಹಗಳನ್ನು ಅಥವಾ ಇನ್ನಿತರೆ ಧಾರ್ಮಿಕ ಸಂಕೇತಗಳನ್ನು ಬೇರೆಡೆಗೆ, ಅಂದರೆ ಸಾರ್ವಜನಿಕ ರಸ್ತೆಗಳನ್ನು, ಸಾರ್ವಜನಿಕ ಉದ್ಯಾನವನಗಳನ್ನು ಹಾಗೂ ಇತರೆ ಸಾರ್ವಜನಿಕ ಸ್ಥಳಗಳನ್ನು ಬಿಟ್ಟು, ಬೇರೆ ಯಾವುದಾದರೂ ಅಧಿಕೃತ ಸ್ಥಳಕ್ಕೆ ಸ್ಥಳಾಂತರಿಸುವಂತೆ ಸ್ಥಳೀಯಾ ಧಾರ್ಮಿಕ ಮುಖಂಡರಿಗೆ ಸೂಚಿಸಿ, ಅನಧಿಕೃತವಾಗಿ ನಿರ್ಮಿಸಲಾಗಿದ್ದ ಕಟ್ಟಡವನ್ನು ನೆಲಸಮಗೊಳಿಸುಸುವುದು.
   - ii) ಮಳೆ ನೀರು ಚರಂಡಿಗಳ ಮೇಲೆ, ಎತ್ತರದಲ್ಲಿರುವ ರಸ್ತೆಗಳ ರಕ್ಷಣೆಗಾಗಿ ನಿರ್ಮಿಸಲಾದ ತಡೆಗೋಡೆಗಳಂತಹ ಇತರೆ ಸಾರ್ವಜನಿಕ ಸ್ಥಳಗಳನ್ನು ಅತಿಕ್ರಮಿಸಿ ನಿರ್ಮಿಸಲಾದ ಅನಧಿಕೃತ ಕಟ್ಟಡಗಳನ್ನು ಸಂಪೂರ್ಣವಾಗಿ ನೆಲಸಮಗೊಳಿಸುವುದು.
   - iii) ಆದಾಗ್ಯೂ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳು, ಸಾರ್ವಜನಿಕ ಉದ್ಯಾನವನಗಳಲ್ಲಿ ಹಾಗೂ ಇತರೆ ಸಾರ್ವಜನಿಕ ಸ್ಥಳಗಳಲ್ಲಿ ಅತಿಕ್ರಮಣದಿಂದ ನಿರ್ಮಿಸಲಾದ ಇಂತಹ ಅನಧಿಕೃತ ಕಟ್ಟಡಗಳಿಗೆ ಸಂಬಂಧಿಸಿದಂತೆ ಪ್ರಕರಣವಾರುಗಳಂತೆ (ಕೇಸ್–ಟು–ಕೇಸ್ ಆದಾರದ ಮೇಲೆ) ಪುನರಾವಲೋಕಿಸುವುದು. ಒಂದು ವೇಳೆ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳು ಸದರಿ ನಿರ್ಮಾಣಗಳು ಆ ಪ್ರದೇಶದ ಪ್ರಶಾಂತತೆಗೆ ಭಾಗವುಂಟು ಮಾಡುವುದಿಲ್ಲವೆಂದು ಖಚಿತ ಅಭಿಪ್ರಾಯವನ್ನು ತಾಳಿದಲ್ಲಿ, ಸದರಿ ನಿರ್ಮಾಣಗಳನ್ನು, ಅಂತಹ ಅನಧಿಕೃತ ನಿರ್ಮಾಣಗಳು ಕೆ.ಟಿ.ಸಿ.ಪಿ. ಕಾಯ್ದೆ, ಮುನಿಸಿಪಾಲಿಟಿ ಕಾಯ್ದೆ, ಪುರಸಭೆ ಕಾಯ್ದೆ ಮತ್ತು ಇತರೆ ಸ್ಥಳೀಯ ಕಾನೂನು ಕಾಯ್ದೆಗಳಿಗೆ ವ್ಯತಿರಿಕ್ತವಾಗಿಲ್ಲದಿದ್ದಲ್ಲಿ, ಅವುಗಳನ್ನು ಉಳಿಸಿಕೊಂಡು ಕಾನೂನು ಕಾಯ್ದೆಗೊಳಪಟ್ಟಂತೆ ಅಧಿಕೃತಗೊಳಿಸಬಹುದು.
   - iv) ಸಾರ್ವಜನಿಕ ಉದ್ಯಾನವನಗಳಲ್ಲಿ ಮತ್ತು ಇತರೆ ಸಾರ್ವಜನಿಕ ಸ್ಥಳಗಳಲ್ಲಿ ಒಂದಕ್ಕಿಂತ ಹೆಚ್ಚಿನ ಕೋಮಿನ ಧಾರ್ಮಿಕ ಕಟ್ಟಡಗಳು ನಿರ್ಮಾಣಗೊಂಡಿದ್ದಲ್ಲಿ, ಮತ್ತು ಅವುಗಳಿಂದಾಗಿ ಅಸಹಿಷ್ಣುತೆಯ ವಾತಾವರಣಕ್ಕೆ ಆಸ್ಪದವುಂಟಾಗಿ ಎರಡು ಕೋಮುಗಳ ನಡುವೆ ಘರ್ಷಣೆಯುಂಟಾಗಬಹುದೆಂಬ ಶಂಕೆ ಮೂಡಿಬಂದರೆ, ಸದರಿ ಪ್ರದೇಶದಲ್ಲಿರುವ ಅಂತಹ ಎರಡೂ ಅನಧಿಕೃತ ಕಟ್ಟಡಗಳನ್ನು ನೆಲಸಮಗೊಳಿಸುವುದು.
   - v) ಈ ಕೆಳಕಂಡವರುಗಳನ್ನು ಒಳಗೊಂಡ ಜಿಲ್ಲಾ ಮಟ್ಟದ ಸಮಿತಿಯು ಇಂತಹ ಪ್ರತಿಯೊಂದು ಪ್ರಕರಣಗಳ ಬಗ್ಗೆಯೂ ಕೇಸ್–ಟು–ಕೇಸ್ ಆದಾರದ ಮೇಲೆ ಮೂರು ತಿಂಗಳಿಗೊಮ್ಮೆ ಪುನರ್ ವಿಮರ್ಶಿಸಿ. ಈ ಸರ್ಕಾರಿ ಆದೇಶದ ವ್ಯಾಪ್ತಿಯೊಳಗೆ ಸೂಕ್ತ ನಿರ್ಧಾರವನ್ನು ತೆಗೆದುಕೊಳ್ಳಬಹುದು.
     - a) ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳು – ಅಧ್ಯಕ್ಷರು

b) ಮಹಾನಗರ ಪಾಲಿಕೆಯ ಆಯುಕ್ತರು / ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿಗಳು / ನಗರ ಪಾಲಿಕೆಯ / ನಗರ ಸಭೆ / ಪುರಸಭೆ / ಪಟ್ಟಣಪಂಚಾಯತಿಯ ಆಯುಕ್ತರು/ಮುಖ್ಯಾಧಿಕಾರಿ ಹಾಗೂ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಣಾ ಅಧಿಕಾರಿಗಳು – ಸದಸ್ಯರು

c) ಜಿಲ್ಲೆಯ ಪೊಲೀಸ್ ವರಿಷ್ಠಾಧಿಕಾರಿಗಳು – ಸದಸ್ಯರು

d) ಕಾರ್ಯನಿರ್ವಾಹಣಾ ಅಭಿಯಂತರರು, ಲೋಕೋಪಯೋಗಿ ಇಲಾಖೆ – ಸದಸ್ಯರು

e) ಕಾರ್ಯನಿರ್ವಾಹಣಾ ಅಭಿಯಂತರರು, ಜಿಲ್ಲಾ ಪಂಚಾಯತ್ – ಸದಸ್ಯರು

f) ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು – ಸದಸ್ಯರು

g) ಹೆಚ್ಚುವರಿ ಜಿಲ್ಲಾ ಆಯುಕ್ತರು/ಹೆಚ್ಚುವರಿ ಜಿಲ್ಲಾ ದಂಡಾಧಿಕಾರಿಗಳು – ಸದಸ್ಯ ಸಮಾವೇಶಕರು

vi) ಈ ಮಾರ್ಗಸೂಚಿಗಳೊಂದಿಗೆ ಲಗತ್ತಿಸಿರುವ ಅನುಬಂಧದ ನಮೂನೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲೆಯ ದಂಡಾಧಿಕಾರಿಗಳು, ತ್ರೈಮಾಸಿಕ ವರದಿಯನ್ನು, ಅವಧಿ ಮುಗಿದ ನಂತರದ ತಿಂಗಳ ಮೊದಲನೇ ವಾರದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ಅವರಿಗೆ ತಲುಪುವಂತೆ ಕಳುಹಿಸಿಕೊಡತಕ್ಕದ್ದು.

5. ನಗರ ಸ್ಥಳೀಯ ಸಂಸ್ಥೆಗಳು/ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಇನ್ನು ಮುಂದೆ ವಸತಿ ಬಡಾವಣೆಗಳನ್ನು ನಿರ್ಮಿಸುವಾಗ ತಯಾರಿಸುವ ಯೋಜನಾ ನಕಾಶೆಯಲ್ಲಿ (ಲೇಔಟ್ ಪ್ಲಾನ್) ಕಡ್ಡಾಯವಾಗಿ ದೇವಾಲಯ, ಮಸೀದಿ ಕ್ರೈಸ್ತ ದೇವಾಲಯ, ಗುರುದ್ವಾರ, ಇತ್ಯಾದಿ ಧಾರ್ಮಿಕ ಕಟ್ಟಡಗಳಿಗೆ ಸೂಕ್ತ ಸ್ಥಳವನ್ನು ಗುರ್ತಿಸಿ ಕಾಯ್ದಿರಿಸತಕ್ಕದ್ದು.

6. ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳು ಇಂತಹ ಯೋಜನಾ ನಕಾಶೆ (ಲೇಔಟ್ ಪ್ಲಾನ್)ಯನ್ನು ಅನುಮೋದಿಸತಕ್ಕದ್ದು ಹಾಗೂ ಇಂತಹ ಮೀಸಲಾದ ಸ್ಥಳಗಳಲ್ಲಿ ಧಾರ್ಮಿಕ ಕಟ್ಟಡಗಳ ನಿರ್ಮಾಣದಿಂದ ಮುಂದೆ ಯಾವುದೇ ತರಹದ ಸಮಸ್ಯೆಗಳು ಹಾಗೂ ಕಾನೂನು ಮತ್ತು ಸುವ್ಯಸ್ಥೆಗೆ ಭಂಗಬಾರದ ರೀತಿಯಲ್ಲಿ ಹಾಗೂ ಆ ಪ್ರದೇಶದಲ್ಲಿರುವ ಯಾವುದೇ ಧರ್ಮದ ಜನರಿಂದ ಪ್ರಶಾಂತತೆಗೆ ಧಕ್ಕೆ ಬಾರದಂತೆ ನೋಡಿಕೊಳ್ಳುವ ಜವಾಬ್ದಾರಿಯು ಸಹ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳದ್ದಾಗಿರುತ್ತದೆ.

7. ಮಾನ್ಯ ಸರ್ವೋಚ್ಛ ನ್ಯಾಯಾಲಯವು ಅನಧಿಕೃತ ನಿರ್ಮಾಣಗಳನ್ನು ನಾಶಪಡಿಸುವುದು/ಸ್ಥಳಾಂತರಿಸುವುದು/ಅಧಿಕೃತಗೊಳಿಸುವ ಬಗ್ಗೆ ಪ್ರತಿಯೊಂದು ಪ್ರಕರಣದಲ್ಲೂ ನಿಗದಿತ ಅವಧಿಯೊಳಗಾಗಿ ನಿರ್ಧಾರವನ್ನು ಕೈಗೊಂಡು, ಅದರಂತೆ, ಕ್ರಮವಹಿಸಬೇಕೆಂದು ನಿರ್ದೇಶಿಸಿರುವ ಹಿನ್ನಲೆಯಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳು ಈ ಅನಧಿಕೃತ ನಿರ್ಮಾಣಗಳ ನಾಶಪಡಿಸುವಿಕೆ/ಸ್ಥಳಾಂತರಿಸುವಿಕೆ/ಅಧಿಕೃತಗೊಳಿಸುವಿಕೆಯ ಎಲ್ಲಾ ಪ್ರಕ್ರಿಯೆಗಳನ್ನು ಕಡ್ಡಾಯವಾಗಿ ದಿನಾಂಕ 31–12–2010 ರೊಳಗಾಗಿ ಪೂರೈಸಿ ಸಂಬಂಧಿಸಿದ ಜಿಲ್ಲಾ ಸಮಿತಿಗಳ ಮುಂದೆ ಮೇಲ್ಕಂಡ ಕಂಡಿಕೆಗಳಲ್ಲಿ ವಿವರಿಸಿರುವಂತೆ ಮಂಡಿಸಿ, ತೀರ್ಮಾನ ತೆಗೆದುಕೊಂಡು, ಆ ತೀರ್ಮಾನದಂತೆ ಕ್ರಮವನ್ನು ಪೂರ್ತಿಗೊಳಿಸತಕ್ಕದ್ದು.

8. ಸಂಬಂಧಿಸಿದ ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ದಂಡಾಧಿಕಾರಿಗಳು ಮೇಲೆ ತಿಳಿಸಿರುವ ಎಲ್ಲಾ ಪ್ರಕ್ರಿಯೆಗಳನ್ನು ದಿನಾಂಕ 31–12–2010 ರೊಳಗಾಗಿ ವಿದ್ಯುಕ್ತವಾಗಿ ಪೂರ್ಣಗೊಳಿಸತಕ್ಕದ್ದೆಂದು ಮತ್ತೊಮ್ಮೆ ಮನದಟ್ಟು ಮಾಡಲಾಗಿದೆ. ಈ ಸೂಚನೆಗಳನ್ನು ಉಲ್ಲಂಘನೆಯಾಗದಂತೆ ಅವರು ಖಚಿತಪಡಿಸಿಕೊಳ್ಳತಕ್ಕದ್ದು. ಈ ಸೂಚನೆಗಳ ಉಲ್ಲಂಘನೆಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸುತ್ತದೆಂದು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 798

**ಎಸ್.ವಿ. ರಂಗನಾಥ್**
ಸರ್ಕಾರದ ಮುಖ್ಯ ಕಾರ್ಯದರ್ಶಿ

## PERSONNEL AND ADMINISTRATIVE REFORMS SECRETARIAT

**Sub :** Grant of children educational allowance to All India Service officers – prescribing modalities for drawal of the allowance-reg.

**Read :** 1. Government Order No. DPAR 94 SAS 2009, dated 27-01-2010.

2. Letter No. GM/IAS-II/09-10, dated 8-2-2010 from the Accountant General, Bangalore.

**Preamble:**

In the Government order read at (1) above, sanction has been accorded for grant of children educational allowance to All India Service officers subject to the conditions as stipulated in Government of India order dated 2-9-2008 referred to in the order and also subject to further instructions as may be issued by Government of India thereon from time to time. The Accountant General, Bangalore, in his letter dated 8-2-2010 has advised the Government to issue guidelines prescribing modalities for drawal of children educational allowance by the All India Service officers. The Accountant General has also made it clear that the Accountant General's office would not be issuing authorization to the officers in this regard.

In the meantime, there have also been requests for reconsidering the grant of children education allowance with retrospective effect on par with Government of India guidelines. This has also been examined.

In the circumstances it is ordered as follows :

**GOVERNMENT ORDER NO. DPAR 94 SAS 2009, BANGALORE, DATED 3RD APRIL 2010**

In the circumstances explained in the preamble, the State Government in supercession of earlier order of even number dated 27-1-2010 accord sanction for grant children educational allowance to the members of All India service w.e.f. 2.9.2008 subject to the same ceiling limits and subject to the same conditions as stipulated in the Government of India order dated 2.9.2008 and also subject to the guidelines issued from time to time in that regard and as may be amended from time to time, by the Government of India.

Further, the State Government is pleased to prescribe following procedures and modalities for claiming the Children Educational Allowance by the Members of All India Service and for sanction of the same.

1) The State Government Orders on children educational allowance will be effective from 2.9.2008.
2) The maximum amount of reimbursement on this account is Rs.12,000/- per child per annum with maximum admissibility for two children.
3) The allowance is available for the children studying in the classes starting from nursery to XII standard.
4) The amount can be claimed in each quarter of the financial year. The amount that can be drawn in a quarter is Rs.3000/-. However, the flexibility of drawing a higher amount in one quarter correspondingly reducing it in the next quarter is available.
5) If the spouse of the officer is also employed, only one of them is eligible for the benefit.
6) The benefit also provides for payment of hostel subsidy of Rs.3000/- per month with the same conditions as above, but only one of the benefits i.e. either children educational allowance or hostel subsidy can be claimed. The hostel subsidy shall also be claimed on a quarterly basis, in the same manner as children educational allowance.
7) The allowance is reimbursed to the officers by the concerned drawing and disbursing officer, on production of bill duly supported by the vouchers in support of the expenditure incurred, after obtaining a certificate/sanction by the next higher authority to the officer concerned. The Regional Commissioners of the Division may issue such certificates to the Deputy Commissioners, Chief Executive Officers of ZP and other IAS officers working in their Division. The Secretaries to Government concerned shall issue the certificates to the Heads of the Departments and other officers working in the administrative control of the respective secretariat department.

8) In respect of IPS cadre, the respective Deputy Inspector General of Police shall issue certificate to the IPS officers under their jurisdiction, the respective Inspector General of Police shall issue certificates to the DIGP level officers coming under their jurisdiction and the ADGPs/DG&IGP shall issue certificates to IGP level officers under their jurisdiction and also the DG&IGP shall issue certificate to the officers at ADGP level. The Home Secretary shall issue certificates to the DG&IGP level officers.

9) In respect of IFS cadres, the respective Conservator of Forests concerned shall issue certificate to all the IFS officers coming under their jurisdiction, the Chief conservator of Forests and PCCF/Additional PCCF shall issue certificate to all Chief Conservator of Forests coming under their jurisdiction and the PCCF shall issue certificates to the officers at Additional PCCF level. The Principal Secretary/Secretary to Government shall issue certificates to the PCCF level officers.

10) In respect of the officers working in the Karnataka Government Secretariat, the DPAR (IRLA) shall be drawing and disbursing officer. The certificate/sanction shall be issued to the concerned officer by Deputy Secretary to Government, DPAR (Services).

The procedure and modalities as stipulated above shall be strictly adhered to by all the members of service claiming children educational allowance and the sanctioning authorities.

This issues with the concurrence of Finance Department vide its U.O. Note No.FD 104-Serv-2/2010, dated 26-3-2010.

By Order and in the name of the Governor of Karnataka,

**(K.G. Anantha)**

Under Secretary to Government,

PR. 928 DP&AR (Services-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಕೃತ ಜ್ಞಾಪನ

ಸಂಖ್ಯೆ : ಸಿಆಸುಇ 21 ಇಆಸು 2008 (ಭಾ), ಬೆಂಗಳೂರು, ದಿನಾಂಕ 31ನೇ ಮಾರ್ಚ್ 2010

**ವಿಷಯ :** ಬೆಳಗಾಂ ವಿಭಾಗದ ಬಿಜಾಪುರ ಬಾಗಲಕೋಟೆ ಜಿಲ್ಲೆಗಳಲ್ಲಿ ಹಾಗೂ ಗುಲ್ಬರ್ಗಾ ವಿಭಾಗದಲ್ಲಿ ಬೇಸಿಗೆ ಕಾಲದಲ್ಲಿ ಕಛೇರಿ ಕೆಲಸದ ವೇಳೆಯನ್ನು ನಿಗದಿಪಡಿಸುವ ಬಗ್ಗೆ.

**ಉಲ್ಲೇಖ :** (1) ದಿನಾಂಕ 30–03–1995ರ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 84 ಇಆಸು 94.
(**2**) ದಿನಾಂಕ 17–03–2010ರ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 21 ಇಆಸು 2008.

1. ಗುಲ್ಬರ್ಗಾ ವಿಭಾಗದಲ್ಲಿರುವ ಮತ್ತು ಬೆಳಗಾಂ ವಿಭಾಗದ ಬಿಜಾಪುರ ಜಿಲ್ಲೆಯಲ್ಲಿರುವ ಕರ್ನಾಟಕ ಸರ್ಕಾರದ ಎಲ್ಲಾ ಸರ್ಕಾರಿ ಕಛೇರಿಗಳು, ಕಛೇರಿ ಕೆಲಸದ ವೇಳೆಯನ್ನು ಏಪ್ರಿಲ್ ಹಾಗೂ ಮೇ ತಿಂಗಳುಗಳಲ್ಲಿ ಬೆಳಿಗ್ಗೆ 8–00 ರಿಂದ ಮಧ್ಯಾಹ್ನ 1–30 ಘಂಟೆಯವರೆಗೆ ನಿರ್ವಹಿಸತಕ್ಕದೆಂದು ಮೇಲೆ (1) ರಲ್ಲಿ ಉಲ್ಲೇಖಿಸಿದ ದಿನಾಂಕ 30–03–1995ರ ಸರ್ಕಾರಿ ಅಧಿಕೃತ ಜ್ಞಾಪನದನ್ವಯ ನಿಗದಿಪಡಿಸಲಾಗಿತ್ತು.

2. ತರುವಾಯ, ಗುಲ್ಬರ್ಗಾ ವಿಭಾಗದ ಎಲ್ಲಾ ಜಿಲ್ಲೆಗಳಲ್ಲಿ ಹಾಗೂ ಬೆಳಗಾಂ ವಿಭಾಗದ ಬಿಜಾಪುರ ಹಾಗೂ ಬಾಗಲಕೋಟೆ ಜಿಲ್ಲೆಗಳಲ್ಲಿ 2010–11ನೇ ಸಾಲಿನಿಂದ ಜಾರಿಗೆ ಬರುವಂತೆ ಏಪ್ರಿಲ್ ಮತ್ತು ಮೇ ತಿಂಗಳಿನಲ್ಲಿ ಎಲ್ಲಾ ಸರ್ಕಾರಿ ಕಛೇರಿಗಳ ಕೆಲಸದ ವೇಳೆಯನ್ನು ಬೆಳಿಗ್ಗೆ 10–00 ರಿಂದ ಸಂಜೆ 5–30 ಘಂಟೆಯವರೆಗೆ ಇರತಕ್ಕದೆಂದು, ಮೇಲೆ (2)ರಲ್ಲಿ ಉಲ್ಲೇಖಿಸಿದ ದಿನಾಂಕ 17–3–2010 ಸರ್ಕಾರಿ ಅಧಿಕೃತ ಜ್ಞಾಪನದನ್ವಯ ನಿಗದಿಪಡಿಸಲಾಗಿದೆ.

3. ಈ ವಿಷಯವನ್ನು ಸರ್ಕಾರ ಪುನರ್‌ಪರಿಶೀಲಿಸಿದೆ. ಅದರಂತೆ ಮೇಲೆ (2)ರಲ್ಲಿ ಉಲ್ಲೇಖಿಸಿದ ದಿನಾಂಕ 17–03–2010 ರ ಅಧಿಕೃತ ಜ್ಞಾಪನವನ್ನು ಈ ಮೂಲಕ ಭಾಗಶಃ ಮಾರ್ಪಡಿಸುತ್ತಾ, ಮೇಲೆ (1)ರಲ್ಲಿ ಉಲ್ಲೇಖಿಸಲಾದ ದಿನಾಂಕ 30–3–1995ರ ಅಧಿಕೃತ ಜ್ಞಾಪನದನ್ವಯ ನಿಗದಿಪಡಿಸಿದ ಬೆಳಗ್ಗೆ 8–00 ರಿಂದ ಮಧ್ಯಾಹ್ನ 1–30 ಘಂಟೆಯವರೆಗಿನ ಕಛೇರಿ

ಕೆಲಸದ ವೇಳೆಯನ್ನು 2010–11ನೇ ಸಾಲಿನಲ್ಲಿ ಅನ್ವಯಿಸತಕ್ಕದ್ದೆಂದು ಈ ಮೂಲಕ ಸೂಚಿಸಿದೆ. ಮುಂದುವರೆದು, ಮೇಲೆ (2) ರಲ್ಲಿ ಉಲ್ಲೇಖಿಸಿದ ದಿನಾಂಕ 17–3–2010 ರ ಅಧಿಕೃತ ಜ್ಞಾಪನದನ್ವಯ ನಿಗದಿಪಡಿಸಿದ ಕಛೇರಿ ಕೆಲಸದ ವೇಳೆಯು 2011–12ನೇ ಸಾಲಿನಿಂದ ಅನ್ವಯಿಸತಕ್ಕದ್ದೆಂದೂ ಸಹ ಈ ಮೂಲಕ ಸೂಚಿಸಿದೆ.

**(ಅಬ್ದುಲ್ ರೆಹಮಾನ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಸು–ತರಬೇತಿ)

ಪಿ.ಆರ್. 929

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮೊಹಮ್ಮದ್ ಜುಬೇರ್, ಹಿಂದಿನ ತಹಶೀಲ್ದಾರ್, ಹಿರೇಕೇರೂರು ತಾಲ್ಲೂಕು (ಪ್ರಸ್ತುತ ತಹಶೀಲ್ದಾರ್, ರಾಣೆಬೆನ್ನೂರು ತಾಲ್ಲೂಕು) ಮತ್ತು ಶ್ರೀ ಎಸ್.ಜಿ. ಮುನವಳ್ಳಿ, ದ್ವಿದಸ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ :** ಉಪನಿಬಂಧಕರು/ಸಾರ್ವಜನಿಕ ಅಭಿಯೋಜನಕರು ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಪತ್ರ ಸಂ : ಕಂಪ್ಲೆಂಟ್/ಉಪಲೋಕ್/ಎಂವೈಎಸ್–2/2007/PP, ದಿನಾಂಕ 23–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದೊಂದಿಗೆ ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರು ಹಿರೇಕೇರೂರು ತಾಲ್ಲೂಕು ತಹಶೀಲ್ದಾರರಾದ ಶ್ರೀ ಮೊಹಮ್ಮದ್ ಜುಬೇರ್ ಮತ್ತು ಶ್ರೀ ಎಸ್.ಜಿ. ಮುನವಳ್ಳಿ, ದ್ವಿದಸ ಇವರ ವಿರುದ್ಧ ಶ್ರೀ ಜತ್ತಪ್ಪಗೌಡ ಪಾಟೀಲ, ಶಿರಗುಂಬಿ ಗ್ರಾಮ, ಹಿರೇಕೇರೂರು ತಾಲ್ಲೂಕು ಇವರು ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆ ನಡೆಸಿ, ಮಾನ್ಯ ಉಪಲೋಕಾಯುಕ್ತರು ನೀಡಿರುವ ವರದಿಯನ್ನು ಕಳುಹಿಸಿ ವರದಿಯ ಬಗ್ಗೆ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ.

ಸದರಿ ವರದಿಯನ್ನು ಪರಿಶೀಲಿಸಲಾಯಿತು. ಹಾವೇರಿ ಜಿಲ್ಲಾ, ಹಿರೇಕೇರೂರು ತಾಲ್ಲೂಕಿನ ತಹಶೀಲ್ದಾರ್ ಕಛೇರಿಯ ಶ್ರೀ ಎಸ್.ಜಿ. ಮುನವಳ್ಳಿ, ದ್ವಿದಸ ಇವರು ಶಿರಗುಂಬಿ ಗ್ರಾಮದ ಶ್ರೀ ಮಾರುತಿ ದೇವಸ್ಥಾನದ ಲೆಕ್ಕ ಪುಸ್ತಕಗಳನ್ನು ಸರಿಯಾಗಿ ನಿರ್ವಹಿಸದೆ ಸ್ಟೇಟ್ ಅಕೌಂಟ್ಸ್ ಇಲಾಖೆಯವರು ನಡೆಸಿದ ಆಡಿಟ್‌ಗಳಿಗೆ ಸಹಕರಿಸದೆ ಕರ್ತವ್ಯ ಲೋಪವೆಸಗಿದ್ದು, ಹಾಗೂ ದೇವಸ್ಥಾನದ ಆಡಳಿತಾಧಿಕಾರಿಯಾದ ಶ್ರೀ ಮೊಹಮ್ಮದ್ ಜುಬೇರ್, ತಹಶೀಲ್ದಾರ್, ಹಿರೇಕೇರೂರು ದೇವಸ್ಥಾನದ ಲೆಕ್ಕಪತ್ರಗಳನ್ನು ನೀಡದೆ ಮತ್ತು ಸುಳ್ಳು ಮಾಹಿತಿಯನ್ನು ಲೋಕಾಯುಕ್ತ ಕಛೇರಿಗೆ ನೀಡಿ ದೇವಸ್ಥಾನದ ಆಡಳಿತವನ್ನು ಸರಿಯಾಗಿ ನಡೆಸದೆ ಇರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.

ಈ ಹಿನ್ನೆಲೆಯಲ್ಲಿ ಅರ್ಜಿದಾರರಾದ ಶ್ರೀ ಜತ್ತಪ್ಪಗೌಡ ಪಾಟೀಲ, ಶಿರಗುಂಬಿ ಗ್ರಾಮ, ಹಿರೇಕೇರೂರು ತಾಲ್ಲೂಕು ಹಾವೇರಿ ಜಿಲ್ಲೆ ಇವರು ತಹಶೀಲ್ದಾರರಾದ ಶ್ರೀ ಮೊಹಮ್ಮದ್ ಜುಬೇರ್ ಹಾಗೂ ಶ್ರೀ ಎಸ್.ಜಿ. ಮುನವಳ್ಳಿ, ದ್ವಿದಸ ಇವರ ವಿರುದ್ಧ ಮಾನ್ಯ ಲೋಕಾಯುಕ್ತರಿಗೆ ದೂರು ಸಲ್ಲಿಸಿರುತ್ತಾರೆ ಹಾಗೂ ಈ ರೀತಿ ಕರ್ತವ್ಯ ಚ್ಯುತಿ ಎಸಗಿರುವ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸಿಸಿಎ ನಿಯಮ 14–ಎ ರನ್ವಯ ಇಲಾಖಾ ವಿಚಾರಣೆಯನ್ನು ಉಪಲೋಕಾಯುಕ್ತರಿಗೆ ವಹಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಅಂತಹ ಕ್ರಮಗಳನ್ನು ಕೈಗೊಂಡ ಬಗ್ಗೆ ಸದರಿ ಕಾಯ್ದೆಯ 12(4) ರನ್ವಯ 3 ತಿಂಗಳೊಳಗಾಗಿ ಮಾನ್ಯ ಲೋಕಾಯುಕ್ತರಿಗೆ ಮಾಹಿತಿ ನೀಡುವಂತೆ ಕೋರಿರುತ್ತಾರೆ.

ತನಿಖಾ ವರದಿಯಲ್ಲಿನ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿ ಆರೋಪಿತರೆಂದು ಹೇಳಲಾಗಿರುವ ಶ್ರೀ ಮೊಹಮದ್ ಜುಬೇರ್, ಹಿಂದಿನ ತಹಶೀಲ್ದಾರ್, ಹಿರೇಕೇರೂರು ಹಾಗೂ ಶ್ರೀ ಎಸ್.ಜಿ. ಮುನವಳ್ಳಿ, ದ್ವಿದಸ., ತಾಲ್ಲೂಕು ಕಛೇರಿ, ಹಿರೇಕೇರೂರು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 11 ಮತ್ತು 11–ಎ ರನ್ವಯ ವಿಚಾರಣೆ ನಡೆಸುವ ಸಲುವಾಗಿ ಸದರಿ ನಿಯಮಾವಳಿ ನಿಯಮ 14–ಎ ರಡಿಯಲ್ಲಿ ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 14 ಎಡಿಇ 2010, ಬೆಂಗಳೂರು, ದಿನಾಂಕ : 25–03–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಶ್ರೀ ಮೊಹಮದ್ ಜುಬೇರ್, ತಹಶೀಲ್ದಾರ್, ಹಿರೇಕೇರೂರು ತಾಲ್ಲೂಕು (ಪ್ರಸ್ತುತ ತಹಶೀಲ್ದಾರ್ ರಾಣೆಬೆನ್ನೂರು ತಾಲ್ಲೂಕು) ಮತ್ತು ಎಸ್.ಜಿ. ಮುನವಳ್ಳಿ, ದ್ವಿದಸ. ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 11 ಮತ್ತು 11–ಎ ರನ್ವಯ ವಿಚಾರಣೆ ನಡೆಸುವ ಸಲುವಾಗಿ ಸದರಿ ನಿಯಮಾವಳಿಯ ನಿಯಮ 14–ಎರ ಅಡಿಯಲ್ಲಿ ವಿಚಾರಣೆ ಜರುಗಿಸಿ, ಸರ್ಕಾರಕ್ಕೆ ವರದಿ ನೀಡಲು ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ,**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 930 ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಎಸ್.ಎಸ್. ರಂಗನಾಥ್, ವಜಾಗೊಂಡ ಶಿರಸ್ತೇದಾರ್ ಇವರು ಮಾನ್ಯ ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿದ ಮೇಲ್ಮನವಿ ಕುರಿತು.

**ಓದಲಾಗಿದೆ :**

1) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಕಂಇ 286 ಬಿಎಂಎಂ 2003, ದಿನಾಂಕ 28–7–2003.
2) ಸರ್ಕಾರದ ನಡವಳಿ ಸಂಖ್ಯೆ : ಕಂಇ 183 ಬಿಎಂಎಂ 2004, ದಿನಾಂಕ 4–1–2006.
3) ಸರ್ಕಾರದ ನಡವಳಿ ಸಂಖ್ಯೆ : ಕಂಇ 183 ಬಿಎಂಎಂ 2004, ದಿನಾಂಕ 12.9.2006.
4) ಶ್ರೀ ಎಸ್.ಎಸ್. ರಂಗನಾಥ್, ಶಿರಸ್ತೇದಾರ್ ಇವರ ಪುನರಾವಲೋಕನ ಅರ್ಜಿ ದಿನಾಂಕ 9–10–2006, 25–10–2006 ಮತ್ತು 10–11–2006.
5) ಸರ್ಕಾರದ ನಡವಳಿ ಸಂಖ್ಯೆ : ಕಂಇ 623 ಬಿಎಂಎಂ 2006, ದಿನಾಂಕ 6–3–2007.
6) ಶ್ರೀ ಎಸ್.ಎಸ್. ರಂಗನಾಥ್, ಶಿರಸ್ತೇದಾರ್ ಇವರು ಘನತೆವೆತ್ತ ರಾಜ್ಯಪಾಲರಿಗೆ.
7) ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ–18ರಡಿ ಸಲ್ಲಿಸಿದ ಮೇಲ್ಮನವಿ ದಿನಾಂಕ 30–9–2006.
8) ಘನತೆವೆತ್ತ ರಾಜ್ಯಪಾಲರ ಆದೇಶ ಸಂಖ್ಯೆ : ಜಿಎಸ್ 56 ಆರ್‌ಎಸಿ 2006, ದಿನಾಂಕ 2–3–2010.

**ಪ್ರಸ್ತಾವನೆ :**

ರಾಜ್ಯ ಚುನಾವಣಾ ಆಯೋಗದಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದ, ಕಂದಾಯ ಇಲಾಖೆಯ ಶಿರಸ್ತೇದಾರ್ ವೃಂದದ ನೌಕರರಾದ ಶ್ರೀ ಎಸ್.ಎಸ್. ರಂಗನಾಥ್, ಇವರನ್ನು ದಿನಾಂಕ 22–5–2003 ರಂದು ರಾಜ್ಯ ಚುನಾವಣಾ ಆಯೋಗವು, ಆಯೋಗದ ಕರ್ತವ್ಯದಿಂದ ಬಿಡುಗಡೆ ಮಾಡಿ, ಬೆಂಗಳೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಸೂಚಿಸಿದ್ದರ ಮೇರೆಗೆ, ಶ್ರೀ ಎಸ್.ಎಸ್. ರಂಗನಾಥ್‌ರವರನ್ನು ಆ ಜಿಲ್ಲೆಯಲ್ಲಿ ಶಿರಸ್ತೇದಾರರ ಹುದ್ದೆಗಳು ಖಾಲಿ ಇಲ್ಲದ ಕಾರಣ ಬೆಂಗಳೂರು ಜಿಲ್ಲಾಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯಂತೆ ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ಅಧಿಕೃತ ಜ್ಞಾಪನದನ್ವಯ ಸರ್ಕಾರವು ಗೌರಿಬಿದನೂರು ತಾಲ್ಲೂಕು ಕಛೇರಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು. ಆದರೆ ಶ್ರೀ ಎಸ್.ಎಸ್. ರಂಗನಾಥ್ ಇವರು ವರ್ಗಾಯಿಸಿ ನೇಮಿಸಿದ ಸ್ಥಳದಲ್ಲಿ ವರದಿ ಮಾಡಿಕೊಳ್ಳದೇ ಮೂರು ವರ್ಷಗಳ ಕಾಲ ನಿರಂತರವಾಗಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ ಕರ್ತವ್ಯ ನಿರ್ಲಕ್ಷತೆ ತೋರಿದ ಹಾಗೂ ಮೇಲಾಧಿಕಾರಿಗಳ ವಿರುದ್ಧ ಹುರುಳಿಲ್ಲದ ದೂರು ನೀಡುತ್ತಾ ನಡತೆ ನಿಯಮಗಳನ್ನು ಉಲ್ಲಂಘಿಸಿದ ಆರೋಪಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಗಳು ನಿಯಮ 11(5) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರೋಪಿತ ನೌಕರರ ವಿರುದ್ಧ ವಿಚಾರಣೆ ನಡೆಸಲು ಜಿಲ್ಲಾ ನಿವೃತ್ತ ನ್ಯಾಯಾಧೀಶರಾದ ಶ್ರೀ ಸವಕರ್ ವೈ.ಆರ್. ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ವಿಚಾರಣೆ ನಡೆಸಲು ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಆರೋಪಿತ ನೌಕರರ ಮೇಲೆ ನಿಯಮಾನುಸಾರ ವಿಚಾರಣೆ ನಡೆಸಿ, ದಿನಾಂಕ 8–5–2006 ರಂದು ಸರ್ಕಾರಕ್ಕೆ ಸಲ್ಲಿಸಿದ ವಿಚಾರಣಾ ವರದಿಯಿಂದ ಶ್ರೀ ಎಸ್.ಎಸ್. ರಂಗನಾಥ್, ಶಿರಸ್ತೇದಾರ್ ಇವರು ಸತತ ಮೂರು

ವರ್ಷಗಳ ಕಾಲ ಕರ್ತವ್ಯಕ್ಕೆ ಗೈರು ಹಾಜರಾಗಿ ಬೇಜವಾಬ್ದಾರಿ ಹಾಗೂ ಮೇಲಾಧಿಕಾರಿಗಳ ವಿರುದ್ಧ ಹುರುಳಿಲ್ಲದ ಆರೋಪಗಳನ್ನು ಮಾಡಿ ನಡತೆ ನಿಯಮಗಳನ್ನು ಉಲ್ಲಂಘಿಸಿರುವುದು ಸಾಬೀತಾದ ಹಿನ್ನಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಗಳು ನಿಯಮ 8(viii) ರನ್ವಯ ಗೌರಿಬಿದನೂರು ತಾಲ್ಲೂಕು ಕಛೇರಿಗೆ ವರ್ಗಾಯಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದ ಮೇಲೆ ಮೇಲಿನ ಕ್ರಮಸಂಖ್ಯೆ : (3) ರಲ್ಲಿ ಓದಲಾದ ಸರ್ಕಾರದ ಆದೇಶದ ವಿರುದ್ಧ ಶ್ರೀ ಎಸ್.ಎಸ್. ರಂಗನಾಥ್, ಸೇವೆಯಿಂದ ವಜಾಗೊಂಡ ಶಿರಸ್ತೇದಾರ ಇವರು ಮೇಲೆ ಕ್ರಮ ಸಂಖ್ಯೆ : (4) ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಗಳು ನಿಯಮ 26 ರಡಿಯಲ್ಲಿ ಸರ್ಕಾರಕ್ಕೆ ಸಲ್ಲಿಸಿದ ಪುನರಾವಲೋಕನ (ಪುನರ್ವಿಲೋಕನ) ಅರ್ಜಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸದರಿ ಅರ್ಜಿಯಲ್ಲಿ ತಮ್ಮನ್ನು ಸಮರ್ಥಿಸಿಕೊಳ್ಳುವಂತಹ ಯಾವುದೇ ಅಂಶಗಳಾಗಲೀ ಅಥವಾ ದಾಖಲೆಗಳಾಗಲೀ ಇಲ್ಲದಿರುವ ಮೇರೆಗೆ ಶ್ರೀ ಎಸ್.ಎಸ್. ರಂಗನಾಥ್ ಅವರು ಸಲ್ಲಿಸಿದ ಪುನರಾವಲೋಕನ ಅರ್ಜಿಯನ್ನು ತಿರಸ್ಕರಿಸಿ, ಮೇಲೆ ಕ್ರಮಸಂಖ್ಯೆ (3) ರಲ್ಲಿ ಓದಲಾದ ಆದೇಶದನ್ವಯ ವಿಧಿಸಿದ ದಂಡನೆಯನ್ನು ಎತ್ತಿ ಹಿಡಿದು ಮೇಲೆ ಕ್ರಮ ಸಂಖ್ಯೆ : (5) ರಲ್ಲಿ ಓದಲಾದ ನಡವಳಿಯಲ್ಲಿ ಆದೇಶಿಸಲಾಗಿತ್ತು.

ತದನಂತರ ಮೇಲೆ ಕ್ರಮ ಸಂಖ್ಯೆ : (3) ರಲ್ಲಿ ಓದಲಾದ ಆದೇಶದ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಗಳ ನಿಯಮ 18 ರನ್ವಯ ಶ್ರೀ ಎಸ್.ಎಸ್. ರಂಗನಾಥ್, ವಜಾಗೊಂಡ ಶಿರಸ್ತೇದಾರ ಇವರು ದಿನಾಂಕ : 30–9–2006 ರಂದು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿದ ಮೇಲ್ಮನವಿಯ ಬಗ್ಗೆ ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

''I have considered the appeal petition submitted under rule 18 of KCS(CCA) Rules 1957 by Sri S.S. Ranganath, against the Government Order No. RD 183 BMM 2004 dated 12th September 2006 imposing the penalty of dismissal from Government service, in the light of the contentions raised in the appeal petition and on perusal of the connected enquiry and appeal records.

The fact that he remained unauthorisedly absent from duty was proved in the enquiry. But since the appellant has not indulged in corrupt practices, but was unauthorizedly absent, and was also provoked into litigation by his new posting order not being given effect to, I consider the penalty of dismissal from service imposed on the appellant a bit harsh, as he fails to get even retirement benefits. Hence, I partly allow the appeal petition and modify the punishment of dismissal of the appellant from Government service to that of compulsory retirement from Government service.”

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 299 ಬಿಎಂಎಂ 2007, ಬೆಂಗಳೂರು, ದಿನಾಂಕ : 30–03–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಎಸ್. ರಂಗನಾಥ್, ಶಿರಸ್ತೇದಾರ್ ಇವರನ್ನು ವರ್ಗಾಯಿಸಿ ನೇಮಿಸಿದ ಗೌರಿಬಿದನೂರು ತಾಲ್ಲೂಕು ಕಛೇರಿಯಲ್ಲಿ ಹಾಜರಾಗದೇ ಸತತ ಮೂರು ವರ್ಷಗಳ ಕಾಲ ಅನಧಿಕೃತ ಗೈರು ಹಾಜರಾಗಿ ಕರ್ತವ್ಯಲೋಪ ಎಸಗಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ : ಕಂಇ 183 ಬಿಎಂಎಂ 2004 ದಿನಾಂಕ : 12–9–2006 ರಲ್ಲಿ ಸದರಿ ನೌಕರರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರನ್ವಯ ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕು ಕಛೇರಿಗೆ ವರ್ಗಾಯಿಸಿದ ದಿನಾಂಕ : 28–7–2003 ರಿಂದ ಜಾರಿಗೆ ಬರುವಂತೆ, ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದನ್ನು ಮಾರ್ಪಡಿಸಿ, ಅದೇ ನಿಯಮಗಳ ನಿಯಮ 8(vi) ರನ್ವಯ ಗೌರಿಬಿದನೂರು ತಾಲ್ಲೂಕು ಕಛೇರಿಗೆ ವರ್ಗಾಯಿಸಿದ ದಿನಾಂಕ : 28–7–2003 ರಿಂದ ಅನ್ವಯವಾಗುವಂತೆ, ಶ್ರೀ ಎಸ್.ಎಸ್. ರಂಗನಾಥ್, ಶಿರಸ್ತೇದಾರ್ ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–1)

ಪಿ.ಆರ್. 931

## ಕಂದಾಯ ಸಚಿವಾಲಯ

**ವಿಷಯ :** ಸರ್ಕಾರಿ ಜಮೀನುಗಳ ಒತ್ತುವರಿಯನ್ನು ತೆರವುಗೊಳಿಸುವ ಉದ್ದೇಶದ ವೆಚ್ಚಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸಮಸಂಖ್ಯೆಯ ಸರ್ಕಾರಿ ಆದೇಶ ದಿ : 25–9–2009.

2) ಕಾರ್ಯದರ್ಶಿಗಳು, ಕಂದಾಯ ಇಲಾಖೆ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ದಿ : 27–3–2010.

**ಪ್ರಸ್ತಾವನೆ :**

ಸರ್ಕಾರಿ ಜಮೀನನ್ನು ಗುರುತಿಸಲು ಹಾಗೂ ಅದನ್ನು ಒತ್ತುವರಿ ಮಾಡಿಕೊಂಡಿರುವುದನ್ನು ತೆರವುಗೊಳಿಸಲು ರಚಿಸಲಾಗಿರುವ ಕಾರ್ಯಪಡೆ ಉದ್ದೇಶಕ್ಕೆ 2009–10 ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2053–00–800–0–04–059 (ಯೋಜನೇತರ) ಅಡಿಯಲ್ಲಿ ರೂ.108.16 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಮೇಲೆ ಓದಲಾದ ಉಲ್ಲೇಖ (1)ರ ದಿ: 25–9–2009ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲೆಗೆ ಸೇರಿದ ಜಮೀನುಗಳ ಒತ್ತುವರಿ ತೆರವುಗೊಳಿಸಿ ತಂತಿಬೇಲಿ ಅಳವಡಿಸಲು, ಹರಾಜು ಪ್ರಕಟಣೆಯನ್ನು ದಿನ ಪತ್ರಿಕೆಗಳಲ್ಲಿ ಜಾಹಿರಾತು ಹೊರಡಿಸುವ ಸಲುವಾಗಿ ಹಾಗೂ ಇತರೆ ವೆಚ್ಚಗಳಿಗಾಗಿ 2009–10ನೇ ಸಾಲಿಗೆ ಮೇಲಿನ ಲೆಕ್ಕ ಶೀರ್ಷಿಕೆ ಅಡಿಯಲ್ಲಿನ ಅನುದಾನದಿಂದ ರೂ.30.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಉಲ್ಲೇಖ (2)ರ ತಮ್ಮ ಪತ್ರದಲ್ಲಿ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ, ಬೆಂಗಳೂರು ಇವರು ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮವು ಈಗಾಗಲೇ ಕೆಲವು ಸರ್ಕಾರಿ ಜಮೀನುಗಳನ್ನು ಒತ್ತುವರಿಯಿಂದ ತೆರವುಗೊಳಿಸಿ ಇವುಗಳ ಸಂರಕ್ಷಣೆಗಾಗಿ ತಂತಿಬೇಲಿ ನಿರ್ಮಿಸಿದ್ದು, ಇನ್ನು ಇತರೆ ಕೆಲವು ಪ್ರಸ್ತಾವನೆಗಳು ಪರಿಶೀಲನೆಯಲ್ಲಿದೆ ಎಂದು ತಿಳಿಸುತ್ತಾ, ಸರ್ಕಾರಿ ಜಮೀನುಗಳನ್ನು ಒತ್ತುವರಿಯಿಂದ ತೆರವುಗೊಳಿಸಿದ್ದು, ಅವುಗಳ ಸಂರಕ್ಷಣೆಗೆ ತಂತಿಬೇಲಿ ನಿರ್ಮಿಸುವ ಸಲುವಾಗಿ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕಾಗಿ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 406 ಎಲ್.ಜಿ.ಬಿ. 2009, ಬೆಂಗಳೂರು, ದಿನಾಂಕ : 29–03–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ 2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2053–00–800–0–04–059 (ಯೋಜನೇತರ) ಅಡಿಯಲ್ಲಿ ರೂ.78.16 ಲಕ್ಷಗಳ (ಎಪ್ಪತ್ತೆಂಟು ಲಕ್ಷದ ಹದಿನಾರು ಸಾವಿರ ರೂಪಾಯಿಗಳು ಮಾತ್ರ) ಮೊತ್ತವನ್ನು ಸರ್ಕಾರದ ಜಮೀನನ್ನು ಒತ್ತುವರಿ ತೆರವುಗೊಳಿಸಿ ಮತ್ತು ಅವುಗಳ ಸಂರಕ್ಷಣೆಗಾಗಿ ತಂತಿಬೇಲಿ ನಿರ್ಮಿಸುವ ಮತ್ತು ತತ್ಸಂಬಂಧ ಇತರೆ ವೆಚ್ಚಗಳಿಗಾಗಿ ಬಳಸುವ ಷರತ್ತಿಗೊಳಪಟ್ಟು ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ.

ಈಗ ಬಿಡುಗಡೆ ಮಾಡಿರುವ ಮೊತ್ತವನ್ನು ಸಂಬಂಧಪಟ್ಟ ಕಛೇರಿಯ ಹಣ ಸೆಳೆಯುವ ಅಧಿಕಾರಿಗಳ ಲೆಕ್ಕ ಶೀರ್ಷಿಕೆಗೆ ಬಿಡುಗಡೆ ಮಾಡುವಂತೆಯೂ ಸಹ ಸರ್ಕಾರವು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾಗಿರುವ ಆರ್ಥಿಕ ಪ್ರತ್ಯಾಯೋಜನೆ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜೆ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. 932

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ವಸುಧೀಶ ತಣ್ಣೀರುಬಾವಿ, ಚುನಾವಣಾ ತಹಶೀಲ್ದಾರ್ ಇವರಿಗೆ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪ್ರಸ್ತಾವನೆ ಸಂ: ಇಎಸ್‌ಟಿ (2)82/09–10, ದಿನಾಂಕ : 01–09–2009.

2) ಮಹಾಲೇಖಪಾಲರು (ಲೆಕ್ಕ ಮತ್ತು ಹಕ್ಕುದಾರಿ) ಇವರ ಪತ್ರ ಸಂ: GE-1/R-1/PF-04/V-127-02/2009-10/1000, Dt: 15-12-2009.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಮಂಗಳೂರು ಇವರ ಪ್ರಸ್ತಾವನೆಯಲ್ಲಿ ಶ್ರೀ ವಸುಧೀಶ ತಣ್ಣೀರುಬಾವಿ, ಚುನಾವಣಾ ತಹಶೀಲ್ದಾರ್ ಜಿಲ್ಲಾಧಿಕಾರಿಗಳ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ವೇತನ ಶ್ರೇಣಿ ರೂ. 6,000–11,200 (ಹಿಂದಿನ ವೇತನ ಶ್ರೇಣಿ) ರಲ್ಲಿ ದಿನಾಂಕ 01–04–2004 ರಿಂದ ಗರಿಷ್ಠ ಹಂತ ತಲುಪಿರುವುದರಿಂದ ದಿನಾಂಕ 01–04–2005 ರಿಂದ ಅನ್ವಯವಾಗುವಂತೆ ಮೂರು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಪ್ರಸ್ತಾಪಿಸಿರುತ್ತಾರೆ. ಅದರಂತೆ, ಮೇಲೆ (2) ರಲ್ಲಿ ಓದಲಾದ ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ದಿನಾಂಕ 15–02–2009ರ ವರದಿಯಲ್ಲಿ ದಿನಾಂಕ 01–04–2005 ರಿಂದ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿರುತ್ತಾರೆ.

ಸರ್ಕಾರವು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ (ಮಂಗಳೂರು) ಜಿಲ್ಲೆ ಮತ್ತು ಮಹಾಲೇಖಪಾಲರು ಕರ್ನಾಟಕ ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ರೂ.6,000–11,200ರ ವೇತನ ಶ್ರೇಣಿಯಲ್ಲಿ ದಿನಾಂಕ 01–04–2005 ರಿಂದ ಅನ್ವಯವಾಗುವಂತೆ ಮೂರು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ನಿರ್ಧರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 607 ಎಎಸ್‌ಡಿ 2009, ಬೆಂಗಳೂರು, ದಿನಾಂಕ : 23–03–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ವಸುಧೀಶ ತಣ್ಣೀರುಬಾವಿ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ ಇವರಿಗೆ ವೇತನ ಶ್ರೇಣಿ 6,000–11,200 ರಲ್ಲಿ ಈ ಕೆಳಕಂಡ 2 ಸ್ಥಗಿತ ವೇತನ ಬಡ್ತಿಗಳನ್ನು ಹಾಗೂ ವೇತನ ಶ್ರೇಣಿ ರೂ.11,400–21,600 ರಲ್ಲಿ ಮೂರನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

**ವೇತನ ಶ್ರೇಣಿ ರೂ. 6,000–11,200 :**

1) ದಿನಾಂಕ : 01–04–2005 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿ.
2) ದಿನಾಂಕ : 01–04–2006 ರಿಂದ ಎರಡನೇ ಸ್ಥಗಿತ ವೇತನ ಬಡ್ತಿ.

**ವೇತನ ಶ್ರೇಣಿ ರೂ. 11,400–21,600 :**

3) ದಿನಾಂಕ : 01–04–2007 ರಿಂದ ಮೂರನೇ ಸ್ಥಗಿತ ವೇತನ ಬಡ್ತಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 933

**ಕಂದಾಯ ಸಚಿವಾಲಯ**

**ವಿಷಯ :** ಗ್ರಾಮ ಸ್ಥಳಾಂತರಕ್ಕಾಗಿ ಬಾಗಲಕೋಟೆ ಜಿಲ್ಲೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** ಮೈಸೂರು ನಾಗರೀಕರ ವೇದಿಕೆ ಮೈಸೂರು ಜೆ.ಎಸ್.ಎಸ್. ಮಹಾವಿದ್ಯಾಪೀಠ, ಇವರ ಪತ್ರ ಸಂಖ್ಯೆ : MCF/ADM/01/2009-10 ದಿನಾಂಕ 05–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮೈಸೂರು ನಾಗರೀಕ ವೇದಿಕೆ ಮೈಸೂರು ಜೆ.ಎಸ್.ಎಸ್. ಮಹಾವಿದ್ಯಾಪೀಠ, ಇವರು ಉತ್ತರ ಕರ್ನಾಟಕದಲ್ಲಿ ನೆರೆ ಹಾವಳಿಗೊಳಗಾದ ಜಿಲ್ಲೆಗಳಲ್ಲಿ ಪುನರ್ವಸತಿ ಕಾರ್ಯಕ್ಕಾಗಿ ಮೈಸೂರು ಜಿಲ್ಲೆ ಹಾಗೂ ಚಾಮರಾಜನಗರ ಜಿಲ್ಲೆಗಳಲ್ಲಿ ಸಾರ್ವಜನಿಕರಿಂದ, ಸಂಘ–ಸಂಸ್ಥೆಗಳಿಂದ ದೇಣಿಗೆ ಬಂದಿರುವ ಮೊತ್ತವನ್ನು ಪುನರ್ವಸತಿ

ಕಾರ್ಯಕ್ಕಾಗಿ ಬಾಗಲಕೋಟೆ ಜಿಲ್ಲೆಗೆ ವರ್ಗಾವಣೆ ಮಾಡುವಂತೆ ಕೋರಿರುತ್ತಾರೆ. ಬಾಗಲಕೋಟೆ, ಬಿಜಾಪುರ, ಗದಗ್ ಜಿಲ್ಲೆಗಳಲ್ಲಿ ಮೈಸೂರು ನಾಗರೀಕ ವೇದಿಕೆ ಜೆ.ಎಸ್.ಎಸ್. ವಿದ್ಯಾಪೀಠ ಮೈಸೂರು ಇವರಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಹಮತಿಗಾಗಿ ಕಳುಹಿಸಲಾಯಿತು. ಆರ್ಥಿಕ ಇಲಾಖೆಯು ಮೈಸೂರು ಜಿಲ್ಲೆಯಲ್ಲಿ ಸಾರ್ವಜನಿಕರಿಂದ ವಂತಿಗೆಯಾಗಿ ಬಂದಿರುವ ರೂ. 14978494–00 ಗಳನ್ನು ಹಾಗೂ ಚಾಮರಾಜನಗರ ಜಿಲ್ಲೆಯಲ್ಲಿ ವಂತಿಗೆ ಬಂದಿರುವ ರೂ.22,39,266–00 ಗಳನ್ನು ಬಾಗಲಕೋಟೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡುವಂತೆ ಆರ್ಥಿಕ ಇಲಾಖೆಯು ಸಹಮತಿ ನೀಡಿರುತ್ತದೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 79 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ : 29–03–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಜಿಲ್ಲೆಗಳಾದ ಬಾಗಲಕೋಟೆ, ಬಿಜಾಪುರ, ಗದಗ್ ಜಿಲ್ಲೆಗಳಲ್ಲಿ ಪ್ರವಾಹದಿಂದ ಪೀಡಿತವಾದ ಗ್ರಾಮಗಳನ್ನು ಸ್ಥಳಾಂತರಿಸಲು (ಮನೆಗಳನ್ನು ಕಟ್ಟಲು) ಕೆಳಕಾಂಡಂತೆ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಂದ ವಂತಿಗೆಯಾಗಿ ಬಂದಿರುವ ಮೊತ್ತಗಳನ್ನು ಬಾಗಲಕೋಟೆ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆಯ ಹೆಸರು | ಮೊತ್ತ |
|---|---|---|
| 1 | ಮೈಸೂರು ಜಿಲ್ಲೆಯಲ್ಲಿ ಸಾರ್ವಜನಿಕರಿಂದ ಬಂದಿರುವ ವಂತಿಗೆ ಮೊತ್ತ | 14978494–00 |
| 2 | ಚಾಮರಾಜನಗರ ಜಿಲ್ಲೆಯಲ್ಲಿ ಸಾರ್ವಜನಿಕರಿಂದ ಬಂದಿರುವ ವಂತಿಗೆ ಮೊತ್ತ | 22,39,266–00 |
| | **ಒಟ್ಟು** | **17217760–00** |

(ರೂ. ಒಂದು ಕೋಟಿ ಎಪ್ಪತ್ತೆರಡು ಲಕ್ಷ ಹದಿನೇಳು ಸಾವಿರದ ಏಳುನೂರಾ ಅರವತ್ತು ಮಾತ್ರ)

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 8235–00–111–0–02 Public Contributions to the Calamity Relief ಅಡಿಯಲ್ಲಿ ಭರಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 8235–00–111–0–02 Public Contributions to the Calamity Relief ನಿಂದ ಜಿಲ್ಲಾ ಖಜಾನೆಯಲ್ಲಿರುವ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರ Miscellaneous Deposit Account-Public Contribution to the Calamity Relief ಖಾತೆಗೆ ಟಿ.ಟಿ.ಆರ್. ಮೂಲಕ ವರ್ಗಾವಣೆ ಮಾಡಲು ಆದೇಶಿಸಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಬಾಗಲಕೋಟೆ ಜಿಲ್ಲೆ ಇವರು ಪೇಯೀಸ್ ರಸೀದಿ ಬಿಲ್ಲು (ಸಿಟಿಎಸ್–8) ತಯಾರಿಸಿ ಮೇಲು ರುಜು ಮಾಡಿ, ಚಲನ್ ಲಗತ್ತಿಸಿ ಜಿಲ್ಲಾ ಖಜಾನೆಗೆ ಸಲ್ಲಿಸುವುದು. ಬಾಗಲಕೋಟೆ ಜಿಲ್ಲೆಯ ಜಿಲ್ಲಾ ಖಜಾನಾಧಿಕಾರಿಗಳು ಈ ಮೊತ್ತವನ್ನು ಮೇಲೆ ತಿಳಿಸಿದಂತೆ ಲೆಕ್ಕ ಶೀರ್ಷಿಕೆ 8235–00–111–0–02 Public Contributions to the Calamity Relief ನಿಂದ ಟಿ.ಟಿ.ಆರ್. ಮೂಲಕ ಜಿಲ್ಲಾ ಖಜಾನೆಯಲ್ಲಿರುವ ಜಿಲ್ಲಾಧಿಕಾರಿಗಳ Miscellaneous Deposit Account-Public Contribution to the Calamity Relief Fund ಖಾತೆಗೆ ವರ್ಗಾವಣೆ ಮಾಡತಕ್ಕದ್ದು.

ಈ ಅನುದಾನವನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ಪುನರ್ವಸತಿ ಕಾರ್ಯಕ್ಕಾಗಿ (ಮನೆಕಟ್ಟಿಸಲು) ಅವಶ್ಯಕತೆಗನುಗುಣವಾಗಿ ನಾಗರೀಕ ವೇದಿಕೆ ಜೆ.ಎಸ್.ಎಸ್. ವಿದ್ಯಾಪೀಠ, ಇವರು ಬಾಗಲಕೋಟೆ, ಬಿಜಾಪುರ, ಗದಗ್ ಜಿಲ್ಲೆಗಳಲ್ಲಿ ಪ್ರವಾಹದಿಂದ ಪೀಡಿತವಾದ ಸ್ಥಳಾಂತರಗೊಳ್ಳಲಿರುವ ಗ್ರಾಮಗಳಲ್ಲಿ ಮನೆಗಳನ್ನು ಕಟ್ಟಿಸಲು ಅವಶ್ಯಕತೆಗನುಗುಣವಾಗಿ ಉಪಯೋಗಿಸುವುದು.

ಈ ಅನುದಾನವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ನೀಡಿರುವ ಸಹಮತಿ ಸಂಖ್ಯೆ : ಎಫ್‌ಡಿ 289 ವೆಚ್ಚ–7/2010 ದಿನಾಂಕ 19.03.2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 934

## ಕಂದಾಯ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕಿನ ಸಾಕೀನ ಅರಭಾವಿ ಗ್ರಾಮದ ಶ್ರೀ ಕನಕದಾಸ ಟ್ರಸ್ಟ್ ಕಮಿಟಿಯ ದೇವಾಲಯವನ್ನು ಅಧಿಸೂಚಿತ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ : ಏಕರೂಪ ಶಾಸನ ಸಿಆರ್ 65/ 2008-09, ದಿನಾಂಕ 04-08-2009.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ 04-08-2009 ರಲ್ಲಿ ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕಿನ ಸಾಕೀನ ಅರಭಾವಿ ಗ್ರಾಮದ ಶ್ರೀ ಕನಕದಾಸ ಟ್ರಸ್ಟ್ ಕಮಿಟಿಯ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡಿಸಲು ದೇವಾಲಯದ ಅಧ್ಯಕ್ಷರು ಕೋರಿರುತ್ತಾರೆ. ಸದರಿ ದೇವಾಲಯದ ಅಧ್ಯಕ್ಷರ ಕೋರಿಕೆ ಮೇರೆಗೆ ಸಹಾಯಕ ಆಯುಕ್ತರು, ಬೆಳಗಾವಿರವರು ಪರಿಶೀಲಿಸಿ ವರದಿಯನ್ನು ಜಿಲ್ಲಾಧಿಕಾರಿಗಳು, ಬೆಳಗಾಂರವರಿಗೆ ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳು, ಬೆಳಗಾವಿರವರು ಸದರಿ ದೇವಾಲಯವು ಸಾರ್ವಜನಿಕ ದೇವಾಲಯವಾಗಿದ್ದು ಈ ಹಿಂದೆ ಮುಂಬಯಿ ಸಾರ್ವಜನಿಕ ಜಿಮ್ಮೆಗಳ ನೋಂದಣಿ ಕಾಯಿದೆ 1950ರ ಅಡಿಯಲ್ಲಿ ನೋಂದಣಿ ಆಗಿದ್ದರೂ ನೂತನ ಕಾಯಿದೆ ಜಾರಿಗೆ ಬಂದಾಗ ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಘೋಷಣೆ ಮಾಡಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಳಗಾವಿರವರ ವರದಿ ಮೇರೆಗೆ ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕಿನ ಸಾಕೀನ ಅರಭಾವಿ ಗ್ರಾಮದ ಶ್ರೀ ಕನಕದಾಸ ಟ್ರಸ್ಟ್ ಕಮಿಟಿಯ ದೇವಾಲಯವನ್ನು ಕರ್ನಾಟಕ ಧಾರ್ಮಿಕ ಸಂಸ್ಥೆಗಳ ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 23ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿಕೆ ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 90 ಮುಆಬಿ 2009, ಬೆಂಗಳೂರು, ದಿನಾಂಕ : 24-03-2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕಿನ ಸಾಕೀನ ಅರಭಾವಿ ಗ್ರಾಮದ ಶ್ರೀ ಕನಕದಾಸ ಟ್ರಸ್ಟ್ ಕಮಿಟಿಯ ದೇವಾಲಯವನ್ನು ಬಿ.ಪಿ.ಟಿ. 1950ರ ಅಡಿಯಲ್ಲಿ ನೋಂದಣಿ ಆಗಿದ್ದರೂ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರದೇ ಇರುವುದರಿಂದ ಈ ದೇವಾಲಯವನ್ನು ಕರ್ನಾಟಕ ಧಾರ್ಮಿಕ ಸಂಸ್ಥೆಗಳ ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 23ರ ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ಶ್ರೀಕಂಠಬಾಬು**
ಪೀಠಾಧಿಕಾರಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 935

## ENERGY SECRETARIAT

**Sub :** Supply of power by Generators in Karnataka to the State Grid Issue of Directions under Section-11 of Electricity Act, 2003.

**Read :** a) Letter No. PTC/MTFG/PCKL/15781 dt. 30-03-2010.

b) GO No. EN 29 EEB 2010 dated 01-04-2010.

c) MD, KPTCL DO Letter No. KPTCL/MD/PS/2009-10 dated : 30-03-2010.

d) Proceedings of the Meeting with CM held on 31-03-2010.

**Preamble:**

1. Karnataka is facing acute and chronic power shortage during 2009-2010. There is a glaring deficit between demand and supply in the State of 20%. Owing to steep increase over the years in the demand for power supply, the daily consumption of energy has also increased. In

the year 2008-09, the daily consumption in March was 129 MUs per day and the same has increased to 144 MUs in the current year.

2. Compared to 2008-09, the State has received better rainfall in the catchment areas of the main hydel reservoirs. However, when compared to the reservoir total capacity, only Linganamakki was 100% full. Mani reservoir received up to 78.21% of capacity and Supa reservoir received 64.71% of its capacity. As of now, 33% of the State's generation is met from hydel sources.

3. The State is making concerted efforts to increase generation. In 2009-10, 350 MW from NCE projects has been added. The 8th Unit of RTPS is expected to commence generation in April 2010 and provide 250 MW to the State grid. The first unit of the M/s Udupi Power Corporation Limited (600 MW) in Udupi is likely to be synchronized in May/June 2010.

4. To augment power supply, the State has initiated measures for procuring power on competitive basis in the short term to meet the load of the summer months. In addition. Arrangements to procure power from cogeneration units, hitherto not available to the State grid, at reasonable rates and using imported coal have also been firmed up with effect from 01-04-2010 vide reference (b).

5. Karnataka has experienced a reduction in power availability from its share of the Central Generating Stations. As against the allocated share of 1542 MW daily, on an average about 1250 MW is being received this year resulting in a shortage of about 292 MW per day. This has further disrupted power availability to the State.

6. The State Government has been intensively reviewing the power situation on a regular basis. It has implemented a series of measures to ensure effective load management and minimum disruption of power in the State. All ESCOMs have poublished the supply hours for the three phase and single phase power supply that will be available in the areas under their control. The availability of power in the designated areas is being closely monitored on feeder basis at the State level.

7. In this period, the situation has been further aggravated by forced and sudden outages of Central and State generating units especially, in March 2010. This has resulted in an average non availability of 400 MW to the State grid each day. Downstream effects from this include reduced allocation to ESCOMs, unscheduled load shedding and disruption of power supply.

8. The Government is conscious of the fact that it is necessary to make power available to the consumers in the coming months especially having regard to the fact that there are examinations scheduled as well as the harvesting season in the month of April. Adequate coal stock is maintained by KPCL at its Thermal Generating Stations in the State.

9. Further in the judicial proceedings the State Government has been issued a direction to provide regular power supply in urban and rural areas of the State to help students appearing for exams, without any hindrance from power cuts. There is also a direction to take all possible steps for increasing supply of electricity to the farming community by 2 hours everyday till the onset of monsoon and to take steps not to hinder drinking water availability.

10. Considering the huge demand supply gap, the State has been forced to buy power from sources outside the State. For the month of March, tenders had been invited to purchase an additional power of 1000 MW. Advance action was initiated for procurement of power through bids for April to August 2010 on 03-02-2010. For the month of April, 2010, against the bid notification for procurement of 750 MW of power, PTC India Ltd., confirmed supply of 250

MW of power, and NTPC VVNL for 150 MW of power. LoIs for the above were issued on 10-03-2010 and 09-03-2010 respectively. NTPC VVNL has till date not scheduled the power. PTC India Ltd., has filed an open access application only for 100 MW. NTPC has stated that generators are not giving power, even though they had committed to NTPC before NTPC's participation in the bid. PTC India Ltd., in their letter dated 30-03-2010 have expressed that due to legal complexities, they are not in a position to schedule 150 MW of power for the month of April 2010. Hence, as against a requirement of 750 MW in April and May each, confirmed power for both April and May 2010 is only 400 MW.

11. Procurement of power through Indian Energy Exchange has not been dependable. Rates are fluctuating and there is no guarantee that the required power can be obtained in the bidding process.

12. The shortage of power faced in the State has resulted in serious disruptive consequences with members of public indulging in "rasta roko", attacking of offices of KPTCL and ESCOMs, thereby creating law and order problem in many parts of the State. Farmers have complained that frequent interruptions of power and short provisioning have badly damaged crop prospects and heightened their economic security.

13. In the circumstances, the endeavour of the State is that every possible source of power should be tapped in the coming months. The expected daily consumption is 140 MU to 145 MU in the month of April and 135 MU to 140 MU in the month of May, against an availability of 120 MU in April 2010 and 115 MU in May 2010. To mitigate the likely power shortages, apart from maximizing generation from various units in the State owned sector, purchases of power from outside the State will have to be suppliemented with whatever power available from Generator in the State. All sources are to be fully tapped to the State grid, to maintain regularity and minimize inconvenience to the public. Maintenance of grid frequency is a matter of paramount concern in the coming months.

14. The State Government is of the considered opinion that the prevailing power situation in the State warrants measures to protect the public interest. The State is also aware that the genuine economic interests of the generators are to be borne in mind in view of costs of inputs for power generation.

15. The proposal to purchase power for the short term in view of the critical shortage in the State, and the need to augment the short term capacity from generators in the State, has been reviewed by the Government.

16. Section 11 of the Electricity Act of 2003 provides that the appropriate Government may specify that a Generating Company shall, in extraordinary circumstances, operate and maintain any generating station in accordance with the directions of that Government.

17. As a matter of policy, it is in the public interest and the duty of the State to mitigate the acute and chronic power crisis in the State.Accordingly, all generators in operation in the State are to run their plants to full exportable capacity and supply all the electricity thus generated to the State Grid, to bridge the demand-supply gap. Hence this Order.

**Government Order No. EN 30 PPC 2010, Bangalore, Dated 3rd April, 2010**

In the extraordinary circumstances explained in the preamble, and in exercise of the powers conferred under Section 11 of the Electricity Act, 2003, the State Government hereby issues the following directions in the public interest.

a) All generators existing and operating in Karnataka State shall operate and maintain the Generating Stations to their maximum exportable capacity and Plant Load Factor (PLF).

b) All generators shall supply all exportable electricity generated to the State Grid until further orders in view of the extraordinary circumstances.

c) The Rates to be paid by the Distribution Companies, for the power supplied to them under the Section-11 directive, by the private producers will be notified separately.

These directions will come into effect immediately.

By Order and in the name of the Governor of Karnataka,

**S.J. SAMPATHKUMAR**
Under Secretary to Government,
Energy Department.

PR. 954

**ಇಂಧನ ಸಚಿವಾಲಯ**

**ವಿಷಯ :** ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಸೂಚನೆ ಸಂಖ್ಯೆ : ಸಿಆಸುಇ 152 ಎಸ್‌ಇಪಿ 2009 ದಿನಾಂಕ : 05–08–2009.
2. ಇಂಧನ ಇಲಾಖೆಯ ಅಧಿಸೂಚನೆ ಸಂಖ್ಯೆ : ಇಎನ್ 101 ಪಿಪಿಸಿ 2009 ದಿನಾಂಕ : 25–09–2009.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ : ಎ1 ಪಿ1 ಬಿ/5672 ದಿನಾಂಕ : 30–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಡಾ. ಸಿ.ಡಿ. ದ್ಯಾವಯ್ಯ ಐ.ಎಫ್.ಎಸ್ (ಕೆಎನ್–82) ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇಲ್ಲಿ ಹೊಸದಾಗಿ ಸೃಜಿಸಲಾಗಿರುವ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಗೆ ನೇಮಿಸಲು ಸದರಿಯವರ ಸೇವೆಯನ್ನು ಇಂಧನ ಇಲಾಖೆಯ ವಶಕ್ಕೆ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಅಧಿಸೂಚನೆಯಲ್ಲಿ ಡಾ. ಸಿ.ಡಿ. ದ್ಯಾವಯ್ಯ ಐ.ಎಫ್.ಎಸ್., ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇಲ್ಲಿನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಆರಣ್ಯ) ಹುದ್ದೆಗೆ ಮರುಸ್ಥಳ ನಿಯುಕ್ತಿಗೊಳಿಸಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರು ಅಕೌಂಟೆಂಟ್ ಜನರಲ್ (ಎ&ಇ), ಕರ್ನಾಟಕ, ಬೆಂಗಳೂರು ಇವರು ಸದರಿ ಅಧಿಕಾರಿಯ ವೇತನ ಮತ್ತು ಭತ್ಯೆಗಳನ್ನು ನೀಡಲು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯನ್ನು ಸೃಜಿಸಿ ಅದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಅದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 101 ಪಿಪಿಸಿ 2009, ಬೆಂಗಳೂರು, ದಿನಾಂಕ : 8ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ದಿನಾಂಕ : 25–09–2009 ರಿಂದ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಒಂದು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪರಿಸರ ಮತ್ತು ಅರಣ್ಯ) ಹುದ್ದೆಯನ್ನು ಸೃಜಿಸಲಾಗಿದೆ :–

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 199 EXP-I ದಿನಾಂಕ : 15–02–2010, ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಟಿಪ್ಪಣೆ ಸಂಖ್ಯೆ : ಸಾಉಇ 16 ಎಸ್‌ಪಿಯು 2010 ದಿನಾಂಕ : 17–03–2010 ಮತ್ತು

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣೆ ಸಂಖ್ಯೆ : ಸಿಆಸುಇ 14 ಎಸ್‌ಎಫ್‌ಪಿ 2010 ದಿನಾಂಕ : 03–04–2010ರ ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 955

**ENERGY SECRETARIAT**

**Sub :** Change of company's name from M/s Mahalakshmi construction Corporation Limited to M/s Mahalakshmi Infra Projects Limited-reg.

**Read :** 1. Government Order. No : EN 133 NCE 2005 dated : 20-05-2005.

2. Letters No : KRED/08MIPL-EIL/2010/556 dated : 23-02-2010/1-3-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, approval has been accorded for transfer of 0.8 MW wind power capacity to M/s Mahalakshmi Construction Corporation Limited from M/s Enercon India Limited at Lakkihalli village, Hiriyur Taluk, Chitradurga District.

The Registrar of Companies, Maharastra, Pune has issued a certificate of incorporation for change of company's name from M/s Mahalakshmi Construction Corporation Limited to M/s Mahalakshmi Infraprojects Limited vide CIN No : U45203 PN 2000 PLC 015630 dated : 21-7-2008.

In the letter read at (2) above, the Managing Director, Karnataka Renewable Energy Development Limited, Bangalore has sent a proposal to Government for change of company's name from M/s Mahalakshmi Construction Corporation Limited to M/s Mahalakshmi Infra Projects Limited.

The proposal has been examined in detail and issued the following Order :-

**Government Order No. EN 93 NCE 2010, Bangalore, Dated 24th March, 2010**

Government accords approval for the change of company's name from M/s Mahalakshmi Costruction Corporation Limited to M/s Mahalakshmi Infraprojects Limited.

The Government has reserved the power to Cancel/modify this Order.

The other terms and conditions of the Government Order No : DE 26 NCE 1999 dated : 13-05-1999 shall IPSO FACTO applicable.

By Order and in the name of the Governor of Karnataka,
**S.J. SAMPATHKUMAR**
Under Secretary to Government,
Energy Department.

PR. 956

**ENERGY SECRETARIAT**

**Sub :** Transfer of 1.5 MW Wind Power Capacity in favour of M/s Palogix Infrastructure Private Limited-reg.

**Read :** 1. Government Order. No : DE 56 NCE 2004 dated : 12-03-2004.

2. Government Order. No : EN 101 NCE 2005 dated : 13-04-2005
3. Government Order. No : EN 124 NCE 2007 dated : 16-04-2007
4. Letter No. KRED/08/PIPL-SIL/2010/685 dated : 6/8-3-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 7.00 MW capacity Wind Power Project at Gopalapura region in Hassan District to M/s Suzlon Developers Private Limited.

In the Government Order read at (2) above, sanction has been accorded for enhancement of capacity from 7.00 MW 15.00 MW Wind Power capacity at Gopalapura village, Hassan District to M/s Suzlon Developers Private Limited.

In the Government Order read at (3) above, sanction has been accorded for enhancement of wind power capacity from 15.00 MW 46.5 MW at Gopalapura region in Hassan District to M/s Suzlon Infrastructure Limited.

The Managing Director, Karnataka Renewable energy Development Limited, Bangalore in his letter read at (4) above, has recommended for transfer of 1.5 MW wind power capacity in favour of M/s Palogix Infrastructure Private Limited from out of the 46.5 MW capacity sanctioned to M/s Suzlon Infrastructure Limited at Gopalapura site in land sy. No. 1 of Mallappanabetta village, Hassan Taluk and District.

The proposal has been examined in detail and the following Orders are issued :-

**Government Order No. EN 68 NCE 2010, Bangalore, Dated 30th March, 2010**

Government accords approval for transfer of 1.5 MW wind power capacity in favour of M/s Palogix Infrastructure Private Limited from out of the 46.5 MW capacity sanctioned to M/s Suzlon Infrastructure Limited at Gopalapura site in land Sy. No. 1 of Mallappanabetta village. Hassan Taluk and District as detailed below and subject to the following conditions :-

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Mallappanabetta | Hassan Taluk and District | 1 | 2Acres for one WTG of 1.5 MW | GP-19 |

1. M/s Palogix Infrastructure Private Limited shall execute and agreement with Government within 45 (forty five) days from the date of issue of this Order.
2. PPA/Wheeling and Banking is assigned to CESC. CESC shall execute the PPA/Wheeling and Banking with M/s Palogix Infrastructure Private Limited within a period of one month.
3. The Government reserves the right to Cancel/modify this Order.
4. The company shall commission the project by 31st March 2010.

The other terms and conditions of the Government Order No:DE 56 NCE 2004 dated: 12-03-2004 shall IPSO FACTO applicable.

By Order and in the name of the Governor of Karnataka,

**S.J. SAMPATHKUMAR**

Under Secretary to Government,

Energy Department.

PR. 957

**ಇಂಧನ ಸಚಿವಾಲಯ**

**ವಿಷಯ :** ಮೆ: ಶಿರುಗುಪ್ಪ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಇವರ 16.00 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು 28.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 413 ಎನ್‌ಸಿಇ 2007 ದಿನಾಂಕ : 11–12–2007.

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರಗಳ ಸಂಖ್ಯೆ : ಕೆಆರ್‌ಇಡಿ/04/ಎಸ್‌ಎಸ್‌ಎಸಿಎಲ್/08/1765 ದಿನಾಂಕ : 17/24–10–2008.

3. ಸರ್ಕಾರಿ ಪತ್ರ ಸಂಖ್ಯೆ : ಇಎನ್ 365 ಎನ್‌ಸಿಇ 2008 ದಿನಾಂಕ : 22-12-2008, 4-2-2009, 7-5-2009, 8-6-2009 ಮತ್ತು 21-7-2009.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಪತ್ರಗಳ ಸಂಖ್ಯೆ : ಕೆಆರ್‌ಇಡಿ/04/ಶಿರುಗುಪ್ಪ/09/2024 ದಿನಾಂಕ : 23/24-06-2009 ಮತ್ತು ಸಂಖ್ಯೆ : ಕೆಆರ್‌ಇಡಿ/04/ಶಿರುಗುಪ್ಪ/10/470 ದಿನಾಂಕ : 19-2-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಆದೇಶದಲ್ಲಿ ಮೆ : ಶಿರುಗುಪ್ಪ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಇವರಿಗೆ ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕಿನ ದೇಶನೂರು ಗ್ರಾಮದಲ್ಲಿ 16.00 MW (Gross) ಮತ್ತು 14.00 MW (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಶಿರುಗುಪ್ಪ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಇವರ 16.00 MW (Gross) ಮತ್ತು 14.00 MW (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು 28.00 MW (Gross) ಮತ್ತು 25.61 MW (exportable) ಸಾಮರ್ಥ್ಯಕ್ಕೆ ಹೆಚ್ಚಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಪತ್ರಗಳಲ್ಲಿ ಈ ಯೋಜನೆಯ ಸಾಮರ್ಥ್ಯ ಹೆಚ್ಚಳಕ್ಕಾಗಿ ಕೆಲವು ಪೂರಕ ದಾಖಲಾತಿಗಳ ಪ್ರತಿಗಳನ್ನು ಮತ್ತು ಕೆಲವು ಮಾಹಿತಿಗಳನ್ನು ಒದಗಿಸುವಂತೆ ಕ್ರೆಡಲ್ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕೋರಿರುವ ಪೂರಕ ದಾಖಲಾತಿ ಮತ್ತು ಮಾಹಿತಿಗಳನ್ನು ಒದಗಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಅದೇಶಿಸಲಾಗಿದೆ :-

**ಸರ್ಕಾರದ ಅದೇಶ ಸಂಖ್ಯೆ : ಇಎನ್ 365 ಎನ್‌ಸಿಇ 2008, ಬೆಂಗಳೂರು, ದಿನಾಂಕ : 29-03-2010**

ಮೆ: ಶಿರುಗುಪ್ಪ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಇವರಿಗೆ ಬಳ್ಳಾರಿ ಜಿಲ್ಲೆಯ ಶಿರುಗುಪ್ಪ ತಾಲ್ಲೂಕಿನ ದೇಶನೂರು ಗ್ರಾಮದಲ್ಲಿ ಅನುಮತಿಸಲಾದ 16.00 MW (Gross) ಮತ್ತು 14.00 MW (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 28.00 MW (Gross) ಮತ್ತು 25.61 MW (exportable) ಸಾಮರ್ಥ್ಯಕ್ಕೆ ಹೆಚ್ಚಿಸಿ ಸಹ ವಿದ್ಯುತ್ ಉತ್ಪಾದನೆ ಮಾಡಲು ನಿರಾಕ್ಷೇಪಣೆಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 958

**ವಸತಿ ಸಚಿವಾಲಯ**

**ವಿಷಯ** : ಆಶ್ರಯ ಗ್ರಾಮೀಣ ನಿವೇಶನಗಳ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ** : ಸರ್ಕಾರದ ಪತ್ರ ಸಂ. ವಇ 57 ಹೆಚ್‌ಎಎಸ್ 2007 ದಿನಾಂಕ 04-08-2007

**ಪ್ರಸ್ತಾವನೆ :**

ರಾಜ್ಯ ಸರ್ಕಾರವು ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿನ ಜನರಿಗೆ ವಸತಿ ಸೌಲಭ್ಯ ಕಲ್ಪಿಸುವುದಕ್ಕಾಗಿ ನಿವೇಶನಗಳನ್ನು ಹಂಚಲು ಆಶ್ರಯ ಗ್ರಾಮೀಣ ನಿವೇಶನಗಳ ಯೋಜನೆಯನ್ನು ಹಮ್ಮಿಕೊಂಡಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಸರ್ಕಾರಿ ಭೂಮಿಯು ಅಲ್ಪ ಪ್ರಮಾಣದಲ್ಲಿಯೂ ಲಭ್ಯವಾಗುತ್ತಿಲ್ಲವಾದ್ದರಿಂದ ಮತ್ತು ಜಮೀನಿನ ದರದಲ್ಲಿ ವಿಪರೀತ ಹೆಚ್ಚಳದಿಂದಾಗಿ ಭಾರಿ ಬೆಲೆಯಲ್ಲಿ ಖಾಸಗಿ ಜಮೀನು ಖರೀದಿಸಲು ಸಾಧ್ಯವಾಗದೇ ಸರ್ಕಾರವು ನಿವೇಶನಗಳ ಹಂಚಿಕೆಗಾಗಿ ನಿಗದಿಪಡಿಸಿದ ಗುರಿಯನ್ನು ಸಾಧಿಸಲಾಗುತ್ತಿಲ್ಲ. ಆದುದರಿಂದ, ಜಿಲ್ಲಾಧಿಕಾರಿಗಳು ಜಮೀನಿನ ಕನಿಷ್ಠ ಮಾರ್ಗಸೂಚಿ ಬೆಲೆಯ ಆಧಾರದ ಮೇಲೆ ಗರಿಷ್ಠ ಮೂರು ಪಟ್ಟು ಹೆಚ್ಚಿನ ಮಿತಿಯವರೆಗೆ ಜಮೀನು ಖರೀದಿಸಲು

ಅನುಮತಿಸಿ, ಅವಶ್ಯವಿರುವ ಹೆಚ್ಚಿನ ಮೊತ್ತ ಬಿಡುಗಡೆ ಮಾಡುತ್ತ ಫಲಾನುಭವಿಗಳ ವಂತಿಗೆಯೊಂದಿಗೆ ಆಶ್ರಯ ಗ್ರಾಮೀಣ ನಿವೇಶನಗಳ ಯೋಜನೆಯನ್ನು ಜಾರಿಗೆ ತರಲು ಪ್ರಸ್ತಾಪಿಸಲಾಗಿದೆ.

2003ರ ಸಮೀಕ್ಷೆ ಪ್ರಕಾರ ರಾಜ್ಯದಲ್ಲಿ ಒಟ್ಟು 10,42986 ಗ್ರಾಮೀಣ ನಿವೇಶನರಹಿತರಿದ್ದು, ಈವರೆಗೂ ಕೇವಲ 24,304 ನಿವೇಶನಗಳನ್ನು ಹಂಚಲಾಗಿದೆ. ಇನ್ನೂ 10,18,682 ನಿವೇಶನಗಳನ್ನು ಹಂಚಬೇಕಾಗಿದೆ. ಆದುದರಿಂದ ಈ ಯೋಜನೆಯಡಿ 2010–11ನೇ ಸಾಲಿನಲ್ಲಿ ಎರಡು ಲಕ್ಷ ನಿವೇಶನಗಳನ್ನು ಹಂಚಲು ಪ್ರಸ್ತಾಪಿಸಲಾಗಿದೆ. ಒಂದು ಎಕರೆ ಜಮೀನಿನಲ್ಲಿ 30' x 40' ವಿಸ್ತೀರ್ಣದ 20 ನಿವೇಶನಗಳಂತೆ, ಸರಾಸರಿ 3.00 ಲಕ್ಷ ರೂ. ಗಳ ದರದಲ್ಲಿ 10,000 ಎಕರೆ ಜಮೀನನ್ನು ಖರೀದಿಸಲು ಯೋಜಿಸಲಾಗಿದೆ. ಕೇಂದ್ರ ಸರ್ಕಾರದ 100.00ಕೋಟಿ ರೂ. ಗಳು, ಹಾಗೂ ರಾಜ್ಯ ಸರ್ಕಾರದ 160.00 ಕೋಟಿ ರೂ.ಗಳ ಸಹಾಯಧನದೊಂದಿಗೆ ಮತ್ತು 40.00 ಕೋಟಿ ರೂ. ಗಳ ಫಲಾನುಭವಿಗಳ ವಂತಿಗೆಯಿಂದ ಈ ಮೊತ್ತವನ್ನು ಭರಿಸಲು ಉದ್ದೇಶಿಸಲಾಗಿದ್ದು, ಅದನ್ನು ಈ ಕೆಳಗಿನ ಆದೇಶದಲ್ಲಿ ಪ್ರಸ್ತಾಪಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ. 65 ಹೆಚ್‌ಎಎಸ್ 2009 (ಭಾ), ಬೆಂಗಳೂರು, ದಿನಾಂಕ: 12ನೇ ಏಪ್ರಿಲ್ 2010**

ಈ ಕಾರ್ಯಕ್ರಮದಡಿಯಲ್ಲಿ ಮಾರ್ಗಸೂಚಿ ದರದ ಮೂರು ಪಟ್ಟು ದರದವರೆಗೆ ಜಮೀನು ಖರೀದಿಸಲು ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಈ ಕೆಳಗಿನಂತೆ ಅಧಿಕಾರಯುತ ಸಮಿತಿಯನ್ನು ರಚಿಸಲಾಗಿದೆ.

ಜಿಲ್ಲಾಧಿಕಾರಿಗಳು .. ಅಧ್ಯಕ್ಷರು,

ಸ್ಥಳೀಯ ಶಾಸಕರು.. ಸದಸ್ಯರು

ಉಪ ವಿಭಾಗಾಧಿಕಾರಿಗಳು.. ಸದಸ್ಯರು

ತಹಸೀಲ್ದಾರರು .. ಸದಸ್ಯರು

ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿ ಸದಸ್ಯ ಕಾರ್ಯದರ್ಶಿ

ಒಂದು ವೇಳೆ ಮಾರ್ಗಸೂಚಿ ದರದ ಮೂರು ಪಟ್ಟು ದರಕ್ಕಿಂತಲೂ ಹೆಚ್ಚಿನ ದರ ಪಾವತಿಸಬೇಕಾದಲ್ಲಿ ಸರ್ಕಾರದ ಮಟ್ಟದಲ್ಲಿ ಪ್ರಕರಣವಾರು ಅನುಮೋದನೆ ಪಡೆಯತಕ್ಕದ್ದು.

2. ಪ್ರಸ್ತುತ 2010ನೇ ಸಾಲಿನಲ್ಲಿ ಎರಡು ಲಕ್ಷ ಫಲಾನುಭವಿಗಳಿಗೆ 30' x 40' ವಿಸ್ತೀರ್ಣದ ನಿವೇಶನ ಹಂಚಲು. ಪ್ರತಿ ಎಕರೆಗೆ ಗರಿಷ್ಠ 3.00 ಲಕ್ಷ ರೂ. ಗಳ ದರದಲ್ಲಿ 10,000 ಎಕರೆ ಜಮೀನು ಖರೀದಿ ಪ್ರಕ್ರಿಯೆ ಪ್ರಾರಂಭಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

3. ಮೇಲ್ಕಾಣಿಸಿದಂತೆಯೂ ಜಮೀನು ಖರೀದಿ ಸಾಧ್ಯವಾಗದಿದ್ದ ಪಕ್ಷದಲ್ಲಿ, ಮನೆ ನಿವೇಶನಗಳ ಹಂಚಿಕೆಗಾಗಿ , The Karnataka Acquisition of Land for Grant of House Sites Act, 1972 (Karantaka Act 18 of 1973) ಮತ್ತು ಅದಕ್ಕೆ ಸಂಬಂಧಿಸಿದ ನಿಯಮಾವಳಿಗಳಲ್ಲಿ ಪ್ರದತ್ತವಾದ ಅಧಿಕಾರವನ್ನು ಚಾಲಾಯಿಸಿ ವಸತಿ ಯೋಗ್ಯವಾದ ಭೂಮಿಯನ್ನು ಭೂಸ್ವಾಧೀನಪಡಿಸಿಕೊಳ್ಳಲು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳು, ಭೂಮಾಲೀಕರೊಂದಿಗೆ ಚರ್ಚಿಸಿ, ಅವರುಗಳ ಸಮ್ಮತಿ ಪಡೆದು (consent award) ಭೂಮಿಯನ್ನು ವಶಕ್ಕೆ ತೆಗೆದುಕೊಳ್ಳುವುದು ಅಥವಾ ಸಂದರ್ಭಾನುಸಾರ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸುವುದು.

4. ಜಮೀನು ಖರೀದಿಗಾಗಿ ಅವಶ್ಯವಿರುವ ಮೊತ್ತವನ್ನು ಈ ಕೇಳಗಿನಂತೆ ಕೇಂದ್ರ ಸರ್ಕಾರದ 100.00 ಕೋಟಿ ರೂ. ಗಳ ಸಹಾಯಧನದೊಂದಿಗೆ, 160.00 ಕೋಟಿ ರೂ. ಗಳ ರಾಜ್ಯ ಸರ್ಕಾರದ ಸಹಾಯಧನದೊಂದಿಗೆ ಮತ್ತು 40.00 ಕೋಟಿ ರೂ. ಗಳ ಫಲಾನುಭವಿಗಳ ವಂತಿಗೆಯಿಂದ ಭರಿಸಬಹುದಾಗಿದೆ.

(ಕೋಟಿ. ರೂಗಳಲ್ಲಿ)

| ಆರ್ಥಿಕ ವರ್ಷ | ನಿಗದಿ ಪಡಿಸಿದ ಗುರಿ | ರಾಜ್ಯ ಸರ್ಕಾರದ ಪಾಲು | ಕೇಂದ್ರ ಸರ್ಕಾರದ ಪಾಲು | ಫಲಾನುಭವಿಗಳ ವಂತಿಗೆ | ಒಟ್ಟು |
|---|---|---|---|---|---|
| 2010–11 | 2,00,000 | 160,00 | 100.00 | 40.00 | 300.00 |

5. ಮುಂದುವರಿದು, ಮೇಲೆ ಹೇಳಿದಂತೆ ಎಲ್ಲಾ ಪ್ರಕರಣಗಳಲ್ಲಿಯೂ, ಎಕರೆಗೆ ಗರಿಷ್ಠ ರೂ. 3.00 ಲಕ್ಷಗಳ ದರವನ್ನು ಸಾಮಾನ್ಯವಾಗಿ ನಿಗದಿಪಡಿಸದೆ, ಸ್ಥಳಿಯ ಸ್ಥಿತಿಗತಿಗೆ ಅನುಗುಣವಾಗಿ, ತಮ್ಮ ವಿವೇಚನೆಯಲ್ಲಿ, ಪ್ರತಿ ಪ್ರಕರಣದಲ್ಲಿನ ದರವನ್ನು ಪರಿಗಣಿಸಿ, ನಿರ್ಧರಿಸುವಂತೆಯೂ ಸಹ, ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಚಂದ್ರಶೇಖರಪ್ಪ)**

ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ

ಪಿ.ಆರ್. 987

## ವಸತಿ ಸಚಿವಾಲಯ

**ವಿಷಯ** : "ಬಸವ – ಇಂದಿರಾ ವಸತಿ ಯೋಜನೆ" ಅಡಿಯಲ್ಲಿ ರಾಜ್ಯದಲ್ಲಿನ ಎಲ್ಲಾ ತಾಲ್ಲೂಕುಗಳನ್ನು ಗುಡಿಸಲುರಹಿತ ತಾಲ್ಲೂಕುಗಳನ್ನಾಗಿ ಮಾಡುವ ಬಗ್ಗೆ.

**ಪ್ರಸ್ತಾವನೆ :**

ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿನ ಫಲಾನುಭವಿಗಳಿಗಾಗಿ ವಿವಿಧ ವಸತಿ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಆದರೆ, ಮನೆ ನಿರ್ಮಾಣಕ್ಕಾಗಿ ಬಳಸುವ ಕಟ್ಟಡ ಸಾಮಗ್ರಿಗಳ ಬೆಲೆಯಲ್ಲಿ ಮತ್ತು ಕಾರ್ಮಿಕರ ಕೂಲಿ ದರಗಳಲ್ಲಿ ಗಣನೀಯವಾಗಿ ಹೆಚ್ಚಳವಾಗಿದ್ದರಿಂದ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ಗುಡಿಸಲುಗಳಲ್ಲಿ ವಾಸಿಸುತ್ತಿರುವ ಫಲಾನುಭವಿಗಳು ಸರ್ಕಾರವು ನೀಡುತ್ತಿರುವ ಸೀಮಿತ ಸಹಾಯಧನದಲ್ಲಿ ಮನೆಗಳನ್ನು ಕಟ್ಟಿಕೊಳ್ಳಲಾಗದೇ ಗುಡಿಸಲುಗಳಲ್ಲಿಯೇ ವಾಸವನ್ನು ಮುಂದುವರೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಎಲ್ಲ ಗುಡಿಸಲುವಾಸಿ ಕುಟುಂಬಗಳಿಗೆ ಸರ್ಕಾರದ ವಸತಿ ಸೌಲಭ್ಯವನ್ನು ಲಭ್ಯಗೊಳಿಸುವ ದೃಷ್ಟಿಯಿಂದ "ಬಸವ–ಇಂದಿರಾ ವಸತಿ ಯೋಜನೆ" ಎಂಬ ನೂತನ ನಾಮಾಂಕಿತ ಯೋಜನೆ ಅಡಿಯಲ್ಲಿ ಅವರೆಲ್ಲರಿಗೂ ಮನೆಗಳನ್ನು ಒದಗಿಸಿ, ರಾಜ್ಯದಲ್ಲಿನ ಎಲ್ಲಾ ತಾಲ್ಲೂಕುಗಳನ್ನು ಗುಡಿಸಲುರಹಿತ ತಾಲ್ಲೂಕುಗಳನ್ನಾಗಿ ಮಾಡಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ಯೋಜಿಸಲಾಗಿದೆ.

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ವತಿಯಿಂದ ನಡೆಸುತ್ತಿರುವ ಸಮೀಕ್ಷೆಯಂತೆ ರಾಜ್ಯದಲ್ಲಿ ಒಟ್ಟು 5,00,000 ಗುಡಿಸಲುವಾಸಿ ಕುಟುಂಬಗಳಿರುವುದಾಗಿ ಅಂದಾಜು ಮಾಡಲಾಗಿದೆ. ಈಗ ಜಾರಿಯಲ್ಲಿರುವ ಇಂದಿರಾ ಅವಾಸ್ ಯೋಜನೆಯಡಿ ಒಂದು ಮನೆಯ ನಿರ್ಮಾಣದ 40,000 ರೂ. ಗಳ ಘಟಕ ವೆಚ್ಚದಲ್ಲಿ ಕೇಂದ್ರ ಸರ್ಕಾರದ ಪಾಲು 26,250 ರೂ. ಗಳಾಗಿದ್ದು, ರಾಜ್ಯ ಸರ್ಕಾರದ ಪಾಲು 13,750 ರೂ. ಗಳಾಗಿರುತ್ತದೆ. ಈಗ ಈ ಘಟಕ ವೆಚ್ಚವನ್ನು 40,000 ರೂ. ಗಳಿಂದ 60,000 ರೂ. ಗಳಿಗೆ ಹೆಚ್ಚಿಸಲು ಮಾನ್ಯ ಮುಖ್ಯ ಮಂತ್ರಿಗಳು ಪ್ರಸಕ್ತ ಸಾಲಿನ ಆಯವ್ಯಯದ ಭಾಷಣದಲ್ಲಿ ಘೋಷಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರವು ಇಂದಿರಾ ಅವಾಸ್ ಯೋಜನೆಯಡಿಯಲ್ಲಿ ನೀಡಲಾಗುವ ಸಹಾಯಧನ, ರಾಜ್ಯ ಸರ್ಕಾರದ ಸಹಾಯಧನ ಮತ್ತು ಫಲಾನುಭವಿಗಳ ವಂತಿಕೆಯೊಂದಿಗೆ ಪ್ರತಿ ವರ್ಷ 1,50,000 ಮನೆಗಳಿಂತೆ ಗುರಿ ನೀಡಲು ಪ್ರಸ್ತಾಪಿಸಲಾಗಿದೆ.

**ಆದೇಶ ಸಂಖ್ಯೆ: ವಇ 86 ಹೆಚ್‌ಎಎಮ್ 2009, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010**

1. ರಾಜ್ಯದಲ್ಲಿನ ಎಲಾ ಗುಡಿಸಲುವಾಸಿಗಳಿಗೆ 2010–11ನೇ ಸಾಲಿನಿಂದ ಪ್ರತಿ ವರ್ಷ 1.50 ಲಕ್ಷ ಮನೆಗಳಂತೆ ಒಟ್ಟು 5 ಲಕ್ಷ ಮನೆಗಳನ್ನು ಮುಂಬರುವ ವರ್ಷಗಳಲ್ಲಿ "ಬಸವ–ಇಂದಿರಾ ವಸತಿ ಯೋಜನೆ" ಅಡಿಯಲ್ಲಿ ನೀಡುವುದಕ್ಕಾಗಿ ಈ ಕೆಳಗಿನಂತೆ ಕೇಂದ್ರ ಸರ್ಕಾರದ ಸಹಾಯಧನ, ರಾಜ್ಯ ಸರ್ಕಾರದ ಸಹಾಯಧನ ಮತ್ತು ಫಲಾನುಭವಿಯ ವಂತೆಗೆ/ಡಿ.ಆರ್.ಐ. ಸಾಲದೊಂದಿಗೆ 1.00 ಲಕ್ಷ ಮನೆಗಳ ನಿರ್ಮಾಣವನ್ನು ಮತ್ತು ರಾಜ್ಯ ಸರ್ಕಾರದ ಸಂಪೂರ್ಣ ಸಹಾಯಧನ ಮತ್ತು ಫಲಾನುಭವಿಯ ವಂತಿಗೆ/ಡಿ.ಆರ್.ಐ. ಸಾಲದೊಂದಿಗೆ 50.000 ಮನೆಗಳ ನಿರ್ಮಾಣವನ್ನು ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

(ಅ). ಕೇಂದ್ರ ಸರ್ಕಾರದ ಸಹಾಯಧನ, ರಾಜ್ಯ ಸರ್ಕಾರದ ಸಹಾಯ ಧನ ಮತ್ತು ಫಲಾನುಭವಿಯ ವಂತಿಗೆ/ಡಿ.ಆರ್.ಐ. ಸಾಲದೊಂದಿಗೆ 1.00 ಲಕ್ಷ ಮನೆಗಳ ನಿರ್ಮಾಣಕ್ಕಾಗಿ ಅವಶ್ಯವಿರುವ ಅನುದಾನ:

(ಕೋಟಿ ರೂ. ಗಳಲ್ಲಿ)

| ಆರ್ಥಿಕ ವರ್ಷ | ನಿಗದಿಪಡಿಸಿದ ' ಗುರಿ | ಮನೆ ನಿರ್ಮಾಣದ ಘಟಕ ವೆಚ್ಚ (ರೂ. ಗಳಲ್ಲಿ) | ರಾಜ್ಯ ಸರ್ಕಾರದ ಪಾಲಿನ ಅನುದಾನ | ಕೇಂದ್ರ ಸರ್ಕಾರದ ಪಾಲಿನ ಅನುದಾನ | ಡಿ.ಆರ್.ಐ. ಸಾಲದಿಂದ | ಫಲಾನುಭವಿಯ ವಂತಿಗೆ | ಒಟ್ಟು ಬೇಕಾದ ಮೊತ್ತ |
|---|---|---|---|---|---|---|---|
| 2010–11 | 1,00,000 | 63,000 | 237.50 | 262.50 | 100.00 | 30.00 | 630.00 |

(ಆ). ರಾಜ್ಯ ಸರ್ಕಾರದ ಸಂಪೂರ್ಣ ಸಹಾಯಧನದೊಂದಿಗೆ 50.000 ಮನೆಗಳ ನಿರ್ಮಾಣಕ್ಕಾಗಿ ಅವಶ್ಯವಿರುವ ಅನುದಾನ:

(ಕೋಟಿ ರೂ. ಗಳಲ್ಲಿ)

| ಆರ್ಥಿಕ ವರ್ಷ | ನಿಗದಿಪಡಿಸಿದ ಗುರಿ | ಮನೆ ನಿರ್ಮಾಣದ ಘಟಕ ವೆಚ್ಚ (ರೂ.ಗಳಲ್ಲಿ) | ರಾಜ್ಯ ಸರ್ಕಾರದ ಪಾಲಿನ ಅನುದಾನ | ಡಿ.ಆರ್.ಐ ಸಾಲದಿಂದ | ಫಲಾನುಭವಿಯ ವಂತಿಗೆ | ಒಟ್ಟು ಬೇಕಾದ ಮೊತ್ತ |
|---|---|---|---|---|---|---|
| 2010–11 | 50,000 | 63,000 | 250.00 | 50.00 | 15.00 | 315.00 |

2. ಈ ಯೋಜನೆಗಾಗಿ 487.50 ಕೋಟಿ ರೂ. ಗಳ ರಾಜ್ಯ ಸರ್ಕಾರದ ಅನುದಾನ ಅವಶ್ಯಕತೆ ಇದ್ದು, ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ನೀಡಿರುವ 422.74 ಕೋಟಿ ರೂ. ಗಳ ಮೊತ್ತದೊಂದಿಗೆ ಈ ಯೋಜನೆಯನ್ನು ಪ್ರಾರಂಭಿಸುವುದು.
3. ಫಲಾನುಭವಿಗಳ ಗ್ರಾಮ ಪ್ರಕ್ರಿಯೆಯನ್ನು ಗ್ರಾಮ ಸಭೆಯ ಮುಖಾಂತರ ನಡೆಸತಕ್ಕದ್ದು.
4. ಈ ಕುರಿತು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಕ್ರಿಯಾ ಯೋಜನೆಯನ್ನು ತಯಾರಿಸಿ ಅದರ ಅನುಷ್ಠಾನಕ್ಕಾಗಿ ಹೊರಡಿಸುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಆರ್. ವಲ್ಲೂರ)**

ಪಿ.ಆರ್. 988 ಪೀಠಾಧಿಕಾರಿ–2, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ** : ಆಶ್ರಯ ನಗರ ನಿವೇಶನಗಳ ಯೋಜನೆಯನ್ನು ಮಾರ್ಪಡಿಸಿ "ವಾಜಪೇಯಿ ನಗರ ನಿವೇಶನಗಳ ಯೋಜನೆ" ಎಂಬ ನೂತನ ನಾಮಾಂಕಿತದಡಿ ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ** : ಸರ್ಕಾರದ ಪತ್ರ ಸಂ. ವಇ 57 ಹೆಚ್‌ಎಎಸ್ 2007 ದಿನಾಂಕ 04–08–2007

**ಪ್ರಸ್ತಾವನೆ :**

ರಾಜ್ಯ ಸರ್ಕಾರವು ರಾಜ್ಯದ ನಗರ ಪ್ರದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿನ ಜನರಿಗೆ ವಸತಿ ಸೌಲಭ್ಯ ಕಲ್ಪಿಸುವುದಕ್ಕಾಗಿ ನಿವೇಶನಗಳನ್ನು ಹಂಚಲು ಆಶ್ರಯ ನಗರ ನಿವೇಶನಗಳ ಯೋಜನೆಯನ್ನು ಹಮ್ಮಿಕೊಂಡಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಸರ್ಕಾರಿ ಭೂಮಿಯು ಲಭ್ಯವಾಗುತ್ತಿಲ್ಲವಾದ್ದರಿಂದ ಮತ್ತು ಜಮೀನಿನ ಖರೀದಿ ದರದಲ್ಲಿ ವಿಪರೀತ ಹೆಚ್ಚಳದಿಂದಾಗಿ ಭಾರಿ ಬೆಲೆಯಲ್ಲಿ ಖಾಸಗಿ ಜಮೀನು ಖರೀದಿಸಲು ಸಾಧ್ಯವಾಗದೇ ಸರ್ಕಾರವು ನಿವೇಶನಗಳ ಹಂಚಿಕೆಗಾಗಿ ನಿಗದಿಪಡಿಸಿದ ಗುರಿಯನ್ನು ಸಾಧಿಸಲಾಗುತ್ತಿಲ್ಲ. ಆದುದರಿಂದ, ಜಿಲ್ಲಾಧಿಕಾರಿಗಳು ಜಮೀನಿನ ಕನಿಷ್ಠ ಮಾರ್ಗಸೂಚಿ ಬೆಲೆಯ ಆಧಾರದ ಮೇಲೆ ಗರಿಷ್ಠ ಮೂರು ಪಟ್ಟು ಹೆಚ್ಚಿನ ಮಿತಿಯವರೆಗೆ ಜಮೀನು ಖರೀದಿಸಲು ಅನುಮತಿಸಿ, ಅವಶ್ಯವಿರುವ ಹೆಚ್ಚಿನ ಮೊತ್ತ ಬಿಡುಗಡೆ ಮಾಡುತ್ತ ಫಲಾನುಭವಿಗಳ ವಂತಿಗೆಯೊಂದಿಗೆ ಈಗ ಜಾರಿಯಲ್ಲಿರುವ ಆಶ್ರಯ ನಗರ ನಿವೇಶನಗಳ ಯೋಜನೆಯನ್ನು ಮಾರ್ಪಡಿಸಿ "ವಾಜಪೇಯಿ ನಗರ ನಿವೇಶನಗಳ ಯೋಜನೆ" ಎಂಬ ನೂತನ ನಾಮಾಂಕಿತದೊಂದಿಗೆ ಜಾರಿಗೆ ತರಲು ಪ್ರಸ್ತಾಪಿಸಲಾಗಿದೆ. ಆದರಂತೆ 2010–11ನೇ ಸಾಲಿನಿಂದ ಮೊದಲನೆಯ ಹಂತದಲ್ಲಿ 50,000 ಫಲಾನುಭವಿಗಳಿಗೆ ನಿವೇಶನ ಹಂಚಲು ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ವಇ 26 ಹೆಚ್‌ಎಎಮ್ 2010, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010**

1. ಆಶ್ರಯ ನಗರ ನಿವೇಶನಗಳ ಯೋಜನೆಯನ್ನು ಸೂಕ್ತವಾಗಿ ಮಾರ್ಪಡಿಸಿ "ವಾಜಪೇಯಿ ನಗರ ನಿವೇಶನಗಳ ಯೋಜನೆ" ಎಂಬ ನೂತನ ನಾಮಾಂಕಿತದಡಿ ಜಾರಿಗೊಳಿಸುವುದಕ್ಕಾಗಿ 2010–11ನೇ ಸಾಲಿನಿಂದ ಮೊದಲನೆಯ ಹಂತದಲ್ಲಿ 50,000 ಫಲಾನುಭವಿಗಳಿಗೆ ನಿವೇಶನ ಹಂಚಲು, ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ದುರ್ಬಲ ವರ್ಗದವರಿಗಾಗಿ ನಗರ ನಿವೇಶನಕ್ಕಾಗಿ ನೀಡಿರುವ ಅನುದಾನದಿಂದ ಒಂದು ಎಕರೆ ಜಮೀನಿನಲ್ಲಿ 20' x 30' ವಿಸ್ತೀರ್ಣದ 40 ನಿವೇಶನಗಳ ರಚನೆಗಾಗಿ 1,250 ಎಕರೆ ಜಮೀನು ಖರೀದಿಸಲು, ಖರೀದಿ ಪ್ರಕ್ರಿಯೆ ಪ್ರಾರಂಭಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.
2. ಜಮೀನು ಖರೀದಿಗಾಗಿ ಅವಶ್ಯವಿರುವ ಮೊತ್ತವನ್ನು ಶೇಕಡ 66.66 ರಷ್ಟು ರಾಜ್ಯ ಸರ್ಕಾರದ ಸಹಾಯಧನದಿಂದ ಹಾಗೂ ಉಳಿದ ಶೇಕಡ 33.34ರಷ್ಟನ್ನು ಫಲಾನುಭವಿಗಳ ವಂತಿಗೆಯಿಂದ ಭರಿಸತಕ್ಕದ್ದು.
3. ಹೊಸದಾಗಿ ನಿರ್ಮಾಣಗೊಳ್ಳುವ ವಸತಿ ಬಡಾವಣೆಗಳಿಗೆ ನಗರ ಸ್ಥಳೀಯ ಸಂಸ್ಥೆಗಳು ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳುವುದು.
4. ಈ ಕಾರ್ಯಕ್ರಮದಡಿಯಲ್ಲಿ ಮಾರ್ಗಸೂಚಿ ದರದ ಗರಿಷ್ಠ ಮೂರು ಪಟ್ಟು ದರದವರೆಗೆ ಜಮೀನು ಖರೀದಿಸಲು ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಈ ಕೆಳಗಿನಂತೆ ಅಧಿಕಾರಯುತ ಸಮಿತಿಯನ್ನು ರಚಿಸಲಾಗಿದೆ.

| | |
|---|---|
| ಜಿಲ್ಲಾಧಿಕಾರಿಗಳು .. .. .. | ಅಧ್ಯಕ್ಷರು |
| ಸ್ಥಳೀಯ ಶಾಸಕರು .. .. .. | ಸದಸ್ಯರು |
| ಉಪ ವಿಭಾಗಾಧಿಕಾರಿಗಳು .. .. | ಸದಸ್ಯರು |
| ನಗರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು .. .. | ಸದಸ್ಯರು |
| ನಗರ ಸ್ಥಳೀಯ ಸಂಸ್ಥೆಯ ಆಯುಕ್ತರು/ಮುಖ್ಯ ಅಧಿಕಾರಿಗಳು .. | ಸದಸ್ಯ–ಕಾರ್ಯದರ್ಶಿ |

5. ಒಂದು ವೇಳೆ ಮಾರ್ಗಸೂಚಿ ದರದ ಮೂರು ಪಟ್ಟು ದರಕ್ಕಿಂತಲೂ ಹೆಚ್ಚಿನ ದರ ಪಾವತಿಸಬೇಕಾದಲ್ಲಿ ಸರ್ಕಾರದ ಮಟ್ಟದಲ್ಲಿ ಪ್ರಕರಣವಾರು ಅನುಮೋದನೆ ಪಡೆಯತಕ್ಕದ್ದು.
6. ಮೇಲ್ಕಾಣಿಸಿದಂತೆಯೂ ಜಮೀನು ಖರೀದಿ ಸಾಧ್ಯವಾಗದಿದ್ದ ಪಕ್ಷದಲ್ಲಿ, ಮನೆ ನಿವೇಶನಗಳ ಹಂಚಿಕೆಗಾಗಿ ಜಿಲ್ಲಾಧಿಕಾರಿಗಳಿಗೆ The Karnataka Acquisition of Lands for Grants of use sites Act 1972 (Karnataka Act 18 of 1973) ಮತ್ತು ಅದಕ್ಕೆ ಸಂಬಂಧಿಸಿದ ನಿಯಮಾವಳಿಗಳಲ್ಲಿ ಭೂಸ್ವಾಧೀನಪಡಿಸಿಕೊಳ್ಳಲು ಅಧಿಕಾರವನ್ನು ಪ್ರತ್ಯಾಯೋಜಿಸಿರುವ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಭೂಮಾಲೀಕರೊಂದಿಗೆ ಚರ್ಚಿಸಿ ಸಮ್ಮತಿ ಐತೀರ್ಪಿನ (consent award) ಮೂಲಕ ಭೂ ಖರೀದಿ ಮಾಡುವುದು ಇಲ್ಲವೆ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸುವುದು.
7. ಮೇಲೆ ಹೇಳಿದಂತೆ ಜಮೀನು ಖರೀದಿಯಲ್ಲಿ ಸರ್ಕಾರದ ಅನುದಾನ ಪೋಲಾಗದೇ ಸದ್ಬಳಕೆಯಾಗುವಂತೆ ಮತ್ತು ಸ್ಥಳೀಯ ಸ್ಥಿತಿಗತಿಗೆ ಅನುಗುಣವಾಗಿ ಪ್ರತಿ ಪ್ರಕರಣದಲ್ಲಿನ ದರವನ್ನು ನ್ಯಾಯಸಮ್ಮತವಾಗಿ ಪರಿಗಣಿಸಿ ನಿರ್ಧರಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.
8. ಈ ಕುರಿತು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವು ಕ್ರಿಯಾ ಯೋಜನೆಯನ್ನು ತಯಾರಿಸಿ ಅದರ ಅನುಷ್ಠಾನಕ್ಕಾಗಿ ಹೊರಡಿಸುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಆರ್. ವಲ್ಲೂರ)**

ಪಿ.ಆರ್. 989 ಪೀಠಾಧಿಕಾರಿ–2, ವಸತಿ ಇಲಾಖೆ

**ವಸತಿ ಸಚಿವಾಲಯ**

**ವಿಷಯ** : ಆಶ್ರಯ ಯೋಜನೆಯಡಿ ನೀಡಿದ ಸಾಲದ ಮೇಲಿನ ಬಡ್ಡಿ ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ** : ಸರ್ಕಾರದ ಪತ್ರ ಸಂ. ವಇ 21 ಹೆಚ್‌ಎಹೆಚ್ 2003 ದಿನಾಂಕ 05–07–2004

**ಪ್ರಸ್ತಾವನೆ :**

ಆಶ್ರಯ ಯೋಜನೆಯು ರಾಜ್ಯದಲ್ಲಿ 1993–94 ಸಾಲಿನಿಂದ ಜಾರಿಯಲ್ಲಿದ್ದು, ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿನ ಫಲಾನುಭವಿಗಳಿಂದ ಅಸಲು ಬಾಕಿ ಇರುತ್ತದೆ. ಆಶ್ರಯ ಯೋಜನೆಯ ಅಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ನೀಡಿದ ಸಾಲದ ಮೇಲಿನ ಮಾರ್ಚ್ 2010 ರವರೆಗಿನ ಅಸಲಿನ ಕಂತುಗಳನ್ನು ಡಿಸೆಂಬರ್ 2010ರೊಳಗೆ ಮರುಪಾವತಿ ಮಾಡುವ ಫಲಾನುಭವಿಗಳಿಗೆ ಸಾಲದ ಮೇಲಿನ ಬಡ್ಡಿಯನ್ನು ಮನ್ನಾ ಮಾಡುವುದಾಗಿ ಮಾನ್ಯ ಮುಖ್ಯ ಮಂತ್ರಿಯವರ 2010–11ನೇ ಸಾಲಿನ ಅಯವ್ಯಯದ ಭಾಷಣದಲ್ಲಿ ಘೋಷಿಸಲಾಗಿದೆ. ಈ ಹಿನ್ನೆಲೆಯಲ್ಲಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ವಇ 76 ಹೆಚ್‌ಎಎಮ್ 2010 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010**

ಮಾನ್ಯ ಮುಖ್ಯ ಮಂತ್ರಿಯವರ 2010–11ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಘೋಷಿಸಿರುವಂತೆ, ಆಶ್ರಯ ಯೋಜನೆಯ ಅಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ನೀಡಿದ ಸಾಲದ ಮೇಲಿನ 31ನೇ ಮಾರ್ಚ್ 2010ರವರೆಗಿನ ಅಸಲಿನ ಕಂತುಗಳನ್ನು 31ನೇ ಡಿಸೆಂಬರ್ 2010ರೊಳಗೆ ಮರುಪಾವತಿ ಮಾಡುವ ಫಲಾನುಭವಿಗಳಿಗೆ ಸಾಲದ ಮೇಲಿನ ಬಡ್ಡಿಯನ್ನು ಮನ್ನಾ ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಸಾಲ ವಸೂಲಾತಿಗಾಗಿ ಸರ್ಕಾರವು ಈಗಾಗಲೇ ಗ್ರಾಮ ಪಂಚಾಯತಿಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳಿಗೆ ಪ್ರೋತ್ಸಾಹ ಧನವನ್ನು ಘೋಷಿಸಿದ್ದು, ಅದರಂತೆ ಸಾಲ ವಸೂಲಾತಿ ಪ್ರಕ್ರಿಯೆಗೆ ಚಾಲನೆ ನೀಡಲು ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಎಲ್ಲ ಅವಶ್ಯ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಆರ್. ವಲ್ಲೂರ)**

ಪಿ.ಆರ್. 990 ಪೀಠಾಧಿಕಾರಿ–2, ವಸತಿ ಇಲಾಖೆ

**COMMERCE & INDUSTRIES SECRETARIAT**

**Read :-**No. CI 101 SGF 2009 Bangalore, Dated 13-04-2010

**NOTIFICATION**

Whereas it is necessary to make an order with a view to enabling Sovereign Distilleries Ltd., at Terdal Village, Jamkhandi Taluk Bagalkote District, to purchase the quantity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of sugar.

Now, therefore, in exercise of the powers conferred by clause 6,7,8 and 9 of the Sugarcane (Control) order 1966 read with CSR 1127, dated 16th July 1966 of the Government of India in the Ministry of Food, Agriculture Community Development and Co-Operation (Department of Food) the Government of Karnataka hereby makes the following orders namely:-

1. **Title, Commencement and Duration of Operation:**

i). This Order may be called the Karnataka Sugarcane (Regulation of Distribution) Sovereign Distilleries Ltd., at Terdal Village, Jamkhandi Taluk, Bagalkote District, Order 2010.

ii. It shall come into force at once and shall remain in force till withdrawn or repealed subject to amendments as the State Government may make from time to time.

2 **Definitions :** In this order :-

a. Factory means the premises of the factory at Terdal Village, owned by Sovereign Distilleries Ltd., at Terdal Village, Jamkhandi Taluk, Bagalkote District, including the precincts of such factory.

b. 'Forms' means a form appended to this order.

c. Words and expressions used in this order but not defined shall have the meaning assigned to them in clause 2 of the Sugarcane (Control) order 1966.

3. Determination of the quantity of Sugarcane required by the factory and reservation of the area for supply of sugarcane.

i) The crushing capacity of Sovereign Distilleries Ltd., being 3500 TCD. The quantity of Sugarcane required by the factory during a year is about 6.30 Lakh MTs to 7.50 Lakh M.Ts.

ii) The factory shall secure the sugarcane determined under sub clause (2) from the areas specified in schedule –I to this order which shall be the area reserved temporarily in the interest of farmers for supplying sugarcane to the factory concerned, till the new factories, likely to come up in that area are established.

**4. Fixation of Quantity of Sugarcane to be supplied by the Grower.**

Every grower of sugarcane in the area reserved temporarily as specified in Schedule-I shall supply to the factory ninetfy five percent of the sugarcane grown by each such grower Co-operative Society operating in the reserved area, through such society.

**5. Agreement to Suppy or Purchase the Determined Quantity of Sugarcane**.

Every grower of sugarcane or a sugarcane grower Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4.

**6. Prohibition of Export of Sugarcane from Area Reserved Teporarily**.

No Sugarcane shall be exported from the area reserved temporarily expect under and in accordance with the conditions of a permit issued by the Deputy Commissioner in Form-I of Scheduled –II

**7 Issue of Permits :**

i) Application for the grant of a permit under clause -6 shall be made in form 2 of Schedule-II and shall be accompanied by a fee of Rs. 5- and an amount of Rs. 100/- as security Deposit.

ii) If any condition of the permit is contravened, the Deputy Commissioner may after giving an opportunity to the person concerned to show cause why the amount deposited by way of security or any part there of may not be forfeited, pass order forefeiting the whole or part of the amount deposited as security.

By Order and in the name of the Governor of Karnataka
**P. Ananda Kumar**
Desk Officer (Sugar)
Commerce and Industries Department

**Schedule-I**

Following 13 villages were allocated temporarily to Sovereign Distilleries Ltd., Terdal Village, Jamkhandi Taluk of Bagalkote District for supply of Sugarcane. The details of villages are as follows :

- 10 villages were withdrawn from Godavari Biorefineries Ltd., Sameeravadi, Jamkhandi Taluk, Bagalkote District
- 3 villages were withdrawn from Ugar Sugars Ltd., Ugar Kurdh, Athani Taluk, Belgaum District

| Jamkhandi Taluk, - (10 villages) from Godavari Biorefineries Ltd., | | |
|---|---|---|
| 1) Terdal | 6) Hosur | |
| 2) Thammadaddi | 7) Kallatti | |
| 3) Hallinggalli | 8) Hanagandi | |
| 4) Rabakavi | 9) Madalamatti | |
| 5) Banahatti | 10 Yaragatti | |
| Athani Taluk, (3 villages) from | Ugar Sugars Ltd., | |
| 1)Segunasi | | |
| 2)Kavatakoppa | | |
| 3)Shankaratti | | |

CI 101 SGF 2009

(**P. Ananda Kumar)**
Desk Officer (Sugar)
Commerce and Industries Department

**SCHEDULE-II – FORM –I**

**(SEE CLAUSE:6)**

The Karnataka Sugarcane (Regulation of Distribution), Sovereign Distillers Ltd., at Terdal Village, Jamkhandi Taluk, Bagalkote District Order 2010.

Permit No. Date:

1. Full Name of the permit holder :
2. Father's Name :
3. Residential Adress in full :
4. Quantity of Sugarcane for which permit is granted for export :
5. Area and village from which Sugar cane is permitted to be Exported

A. Place to which it is to be exported

B. The purpose for which export is permitted :

i. For Sale :

For crushing sugar cane juice for Manufacture of Gur/Sakkare Gul/ Jaggery Rabi or Khandasari

7. Their permit is valid up to

8. The permit is granted subject to the : Following terms and conditions :

a) Permit is not transferable. :

b) The permit shall be produced on On demand by an officer authorized By the Deputy Commissioner

c) On expiry of the validiy of the permission : Within 48 hours of the expiry of the validity date the permit shall be surrendered to the Permit issuing authority.

Signature of he Permit Issuing Authority

Place :

Date:

**SCHEDULE-II – FORM –II**
**(SEE CLAUSE:7)**

The Karnatak Sugarcane (Regulation of Distribution), Sovereign Distillers Ltd., at Terdal Villages, Jamkhandi Taluk Bagalkote District Order 2010. Application for the grant of permit for exporting sugarcane from a reserved area.

1. Full Name of the Applicant :

2. Father's Name :

3. Residential Address in full :

4. Quantity of Sugarcane for which permit is requested for export :

5. Area and the village from which Sugarcane is intended to be exported :

6. The Purpose for which the export is intended.
   i)For Sale
   ii) For Crushing Sugarcane Juice
   or manufacture of Gur/Sakkare
   Gul/Jaggery/Rabi or Khandasari
   For sale or self consumption

I declare that, I am fully aware of the provisions of the Karantaka Sugarcane (Regulation of Distribution), Sovereign Distilleries Ltd., at Terdal Village, Jamkhandi Taluk, Bagalkote District, Order 2010 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No. I of the Schedule appeneded to the Karantaka Sugarcane (Regulation of Distribution), Sovereign Distilleries Ltd., at Terdal Village, Jamkhandi Taluk, Bagalkote District, Order 2010, and I agree to abide by them.

Place : Signature of the Applicant

Date:

PR No. 991

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕಿನ ನವಲೂರು ಕೆರೆಯನ್ನು ಅಭಿವೃದ್ಧಿಪಡಿಸಲು ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಗೆ ಹಸ್ತಾಂತರಿಸುವ ಕುರಿತು.

**ಓದಲಾಗಿದೆ :** 1) ಪತ್ರ ಸಂಖ್ಯೆ:ಎಚ್‌ಡಿಎಂಸಿ/60/01/48/08/1417 ದಿನಾಂಕ 06.10.2008.

2) ಪತ್ರ ಸಂಖ್ಯೆ: ಮುಇಂ/ಸನೀ(ಉ) ವಲಯ/ಬಿಜೆಪಿ/ಎಜಿ–3/2009–10/1505 ದಿನಾಂಕ 11.03.2010.

**ಪ್ರಸ್ತಾವನೆ :**

ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯು ತನ್ನ ಕ್ಷೇತ್ರ ವ್ಯಾಪ್ತಿಯಲ್ಲಿನ ಕೆರೆಗಳನ್ನು ಯೋಜನಾ ಬದ್ಧವಾಗಿ ಅಭಿವೃದ್ಧಿಪಡಿಸಿ ಸಂರಕ್ಷಿಸುವ ಹೊಣೆಗಾರಿಕೆಯನ್ನು ನಿಭಾಯಿಸುವ ದೃಷ್ಟಿಯಲ್ಲಿ ಚಿಂತನೆ ನಡೆಸಿ, ಸಾರ್ವಜನಿಕ ಆರೋಗ್ಯದ ಹಿತದೃಷ್ಟಿಯಿಂದ ಕೆರೆಗಳ ಸುಧಾರಣೆ, ಅಭಿವೃದ್ಧಿ ಹಾಗೂ ಅವುಗಳನ್ನು ನಿರ್ವಹಣೆ ಮಾಡಲು ಇಚ್ಛಿಸಿರುವುದರಿಂದ, ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕಿನ ನವಲೂರು ಕೆರೆಯನ್ನು ಅಭಿವೃದ್ಧಿಪಡಿಸಲು ಮಹಾನಗರ ಪಾಲಿಕೆಗೆ ಹಸ್ತಾಂತರಿಸುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ ಆಯುಕ್ತರು ಕೋರಿರುತ್ತಾರೆ.

ಧಾರವಾಡ ತಾಲ್ಲೂಕಿನ ನವಲೂರು ಕೆರೆಯ ಅಚ್ಚುಕಟ್ಟು ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸಲು ಯಾವುದೇ ಅಡೆತಡೆ ಉಂಟಾಗದಂತೆ ಅಭಿವೃದ್ಧಿಪಡಿಸಿ ಮರು ಹಸ್ತಾಂತರಿಸುವ ಷರತ್ತಿಗೊಳಪಟ್ಟು ಸದರಿ ಕೆರೆಯನ್ನು ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಗೆ ಹಸ್ತಾಂತರಿಸಲು ಆದೇಶ ನೀಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 65 ಕೆಜಿದು 2008, ಬೆಂಗಳೂರು, ದಿನಾಂಕ 13ನೇ ಏಪ್ರಿಲ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಧಾರವಾಡ ತಾಲ್ಲೂಕಿನ ನವಲೂರು ಕೆರೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಸ್ತಾಂತರಿಸಲು ಅನುಮೋದನೆ ನೀಡಿದೆ.

1) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು.
2) ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ವಿನ್ಯಾಸ ಮತ್ತು ಮಾರ್ಪಾಟುಗಳ ಕಾರ್ಯನಿರ್ವಹಿಸುವುದು.
3) ಕಾಲಕಾಲಕ್ಕೆ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವುದು.
4) ಕೆರೆಯ ಹೂಳನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳೊಂದಿಗೆ ಚರ್ಚಿಸಿ ನಿಗದಿತ ಆಳಕ್ಕೆ ತೆಗೆದು ಅಭಿವೃದ್ಧಿಪಡಿಸುವುದು.
5) ಕೆರೆಯ ಅಂಗಳಕ್ಕೆ ಸಾರ್ವಜನಿಕರ ಭೇಟಿಗೆ ಯಾವುದೇ ನಿರ್ಬಂಧವನ್ನು ವಿಧಿಸಬಾರದು.
6) ಕೆರೆಯ ವ್ಯಾಪ್ತಿಯ ನೀರಾವರಿ ಪ್ರದೇಶಕ್ಕೆ ಹಾಗೂ ನೀರಾವರಿಗೆ ಯಾವುದೇ ಅಡೆತಡೆ ಉಂಟಾಗದಂತೆ ಹಾಲಿ ಇರುವ ಕಾಲುವೆಗಳನ್ನು ಸುಸ್ಥಿತಿಯಲ್ಲಿ ನಿರ್ವಹಿಸುವುದು.

7) ಕೆರೆಯನ್ನು ಯಾವುದೇ ಆರ್ಥಿಕ ಲಾಭಕ್ಕೆ ಬಳಸಿಕೊಳ್ಳಬಾರದು.

8) ಈ ಕೆರೆಯ ಮೂಲ ಸ್ವರೂಪಕ್ಕೆ ಧಕ್ಕೆಯಾದಲ್ಲಿ ಅದರ ವೆಚ್ಚವನ್ನು ಭರಿಸತಕ್ಕದ್ದು.

9) ಒಂದು ವೇಳೆ ಒತ್ತುವರಿಯಾಗಿದ್ದಲ್ಲಿ, ಒತ್ತುವರಿಯನ್ನು ತಡೆಗಟ್ಟಲು ಹಾಗೂ ತೆರವುಗೊಳಿಸಲು ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರವು ಕಾನೂನು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 997

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಕಡ್ಲೇವಾಡ ಗ್ರಾಮದ ಹತ್ತಿರ ಭೀಮಾ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬಾಂದಾರ ನಿರ್ಮಾಣ ಕಾಮಗಾರಿಯ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 28–10–2009 ರಂದು ಕೊನೆಗೊಂಡ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಕಡ್ಲೇವಾಡ ಬ್ಯಾರೇಜ್/2009–10/6383.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಕಡ್ಲೇವಾಡ ಗ್ರಾಮದ ಹತ್ತಿರ ಭೀಮಾ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬಾಂದಾರ ನಿರ್ಮಾಣ ಕಾಮಗಾರಿಯ 693–00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. 2006–07ನೇ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತದ ಮೇಲೆ ಶೇ. 14.85 ರಷ್ಟು ಹೆಚ್ಚುವರಿ ಮೊತ್ತಕ್ಕೆ ಅಂದರೆ ರೂ. 9,55,99,693.00 ಗಳಿಗೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ವಹಿಸಲಾಗಿತ್ತು.

2) ಕಾಮಗಾರಿಯು ಜಾರಿಯಲ್ಲಿದ್ದ ಸಂದರ್ಭದಲ್ಲಿ ಮುಖ್ಯ ಇಂಜಿನಿಯರ್‌ರವರು ಹಾಗೂ ಅಧೀಕ್ಷಕ ಇಂಜಿನಿಯರ್‌ರವರು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಯಂತೆ ಟೆಂಡರ್‌ನಲ್ಲಿ ನಿಗಧಿಪಡಿಸಿದ್ದಕ್ಕಿಂತ ಹೆಚ್ಚುವರಿ ಪರಿಮಾಣಗಳನ್ನು ಹಾಗೂ ಕೆಲವು ಕೆಲಸಗಳನ್ನು ಹೆಚ್ಚುವರಿಯಾಗಿ ಗುತ್ತಿಗೆದಾರರು ನಿರ್ವಹಿಸಿದ್ದರಿಂದ ಕಾಮಗಾರಿಯ ವೆಚ್ಚದಲ್ಲಿ ಹೆಚ್ಚಳವಾಗಿದೆ. ಈ ಹೆಚ್ಚಳ ಹಾಗೂ ಟೆಂಡರ್ ಪ್ರೀಮಿಯಂ ಮತ್ತು ಪ್ರೈಸ್ ಅಡ್ಜಸ್ಟ್‌ಮೆಂಟ್ ಕ್ಲಾಸ್ ಸೇರಿದಂತೆ ಕಾಮಗಾರಿಯ ಒಟ್ಟು ಮೊತ್ತ ರೂ. 13,56,13,653–00 ಗಳಾಗಿದೆ. ಈ ಕಾಮಗಾರಿಯಲ್ಲಿ ಉಂಟಾಗಿರುವ ಹೆಚ್ಚಿನ ಆರ್ಥಿಕ ಹೊರೆ ಮೊತ್ತವನ್ನು ಮಂಜೂರಾದ ಮೂಲ ಅಂದಾಜು ಮೊತ್ತ ರೂ. 693–00 ಲಕ್ಷಗಳಿಗೆ ಹೋಲಿಸಿದಾಗ ಶೇ. 95.69 ರಷ್ಟು ಹೆಚ್ಚುವರಿಯಾಗಿದೆ. ಉಂಟಾಗಿರುವ ಹೆಚ್ಚಿನ ಆರ್ಥಿಕ ಹೊರೆಗೆ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸನೀಇ 10 ಅಪಿಬಂ 2009, ಬೆಂಗಳೂರು, ದಿನಾಂಕ 13ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಕಡ್ಲೇವಾಡ ಗ್ರಾಮದ ಹತ್ತಿರ ಭೀಮಾ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬಾಂದಾರ ನಿರ್ಮಾಣ ಕಾಮಗಾರಿಯ ನಿರ್ವಹಣೆಯಲ್ಲಿ ಉಂಟಾಗಿರುವ ರೂ. 6,63,13,653/– (ಆರು ಕೋಟಿ ಅರವತ್ತಮೂರು ಲಕ್ಷದ ಹದಿಮೂರು ಸಾವಿರದ ಆರು ನೂರ ಐವತ್ತಮೂರು) ಹೆಚ್ಚುವರಿ ಆರ್ಥಿಕ ಹೊರೆ (ಮೂಲ ಅಂದಾಜು ಮೊತ್ತ ಸೇರಿ) ಸೇರಿದಂತೆ ಕಾಮಗಾರಿಯ ಒಟ್ಟು ಪರಿಷ್ಕೃತ ಮೊತ್ತ ರೂ. 13,56,13,653/–ಗಳಿಗೆ (ಹದಿಮೂರು ಕೋಟಿ ಐವತ್ತಾರು ಲಕ್ಷದ ಹದಿಮೂರು ಸಾವಿರದ ಆರುನೂರ ಐವತ್ತಮೂರು ರೂ.ಗಳು ಮಾತ್ರ) ಸರ್ಕಾರವು ಅನುಮೋದನೆ ನೀಡಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ 775 ಆಕೋ–1/2009, ದಿನಾಂಕ 22/10/2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಪಿ.ಆರ್. 998

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ಕೆರೆಗಳನ್ನು ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ಕೆರೆಗಳಿಗೆ ಕೃಷ್ಣಾ ನದಿಯಿಂದ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ಇವರ ವತಿಯಿಂದ ನೀರು ತುಂಬಿಸುವ ಸಲುವಾಗಿ ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಪರಿಶೀಲಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸನೀಇ 07 ಕೆಜಿದು 2010, ಬೆಂಗಳೂರು, ದಿನಾಂಕ 12ನೇ ಏಪ್ರಿಲ್ 2010**

ಕೆರೆಗಳಿಗೆ ನೀರು ತುಂಬಿಸುವ ಯೋಜನೆ ಕೈಗೊಳ್ಳುವ ಸಲುವಾಗಿ ಸಣ್ಣ ನೀರಾವರಿ ವ್ಯಾಪ್ತಿಯಲ್ಲಿ ಬರುವ ಬಿಜಾಪುರ ಜಿಲ್ಲೆಯ ಈ ಕೆಳಕಂಡ ಸಣ್ಣ ನೀರಾವರಿ ಕೆರೆಗಳನ್ನು ತಕ್ಷಣ ಜಾರಿಗೆ ಬರುವಂತೆ ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸಲು ಸರ್ಕಾರವು ಅನುಮೋದನೆ ನೀಡಿದೆ.

1) ಮುಳವಾಡ 2) ರೋಣಿಹಾಳ 3) ಮಲಗಾಣ 4) ಮಸೋತಿ (2 ಕೆರೆ) 5) ತಳವಾಡ 6) ಕೊಡಗಿ 7) ಮುತ್ತಗಿ 8) ಕಿರಶ್ಯಾಳ 9) ಕಗ್ಗೊಡ 10) ಮಣ್ಣೂರ 11) ಮುಕರ್ತಿಹಾಳ 12) ಮನಗೊಳಿ 13) ಇಂಗಳೇಶ್ವರ 14) ಉಕ್ಕಲಿ (2 ಕೆರೆ) 15) ಬಸವನ ಬಾಗೇವಾಡಿ–2 16) ಯಾಳವಾರ 17) ಕೊಡಗನೂರ 18) ಬೈರವಾಡಗಿ 19) ಅರಳಿಂಡಿ 20) ಇವಣಿಗಿ 21) ಕಾರಜೋಳ 22) ಮಮದಾಪುರ–2 23) ಅಗಸಬಾಳ 24) ಸಂಕನಾಳ 25) ಹೂವಿನಹಿಪ್ಪರಗಿ 26) ದುಡಿಹಾಳ 27) ಕಂಬಕಡ್ಡಿ.

ಮೇಲ್ಕಂಡ ಕೆರೆಗಳ ಹಸ್ತಾಂತರವು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಅ) ಕೆರೆಗಳನ್ನು ನೀರು ತುಂಬಿಸುವ ಉದ್ದೇಶಕ್ಕಾಗಿ ಬಳಸಿಕೊಳ್ಳುವ ಸಂದರ್ಭದಲ್ಲಿ ನೀರಾವರಿ ಸಲಹಾ ಸಮಿತಿ/ನೀರು ಬಳಕೆದಾರರ ಸಂಘದ ಸಭೆಯಲ್ಲಿ ಗೊತ್ತುವಳಿಯನ್ನು ಅಂಗೀಕರಿಸುವುದು.

ಆ) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು;

ಇ) ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಸ್ಥಿರತೆಗೆ ಹಾಗೂಸಧೃಡತೆಗೆ ಧಕ್ಕೆಯಾಗದಂತೆ ಕಾರ್ಯನಿರ್ವಹಿಸುವುದು;

ಈ) ಕೆರೆಗಳನ್ನು ಯಾವುದೇ ಆರ್ಥಿಕ ಲಾಭಕ್ಕೆ ಬಳಸಿಕೊಳ್ಳಬಾರದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 999

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಕೆ.ಎ. ಹಿದಾಯತ್ತುಲ್ಲ, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ಜನ್ಮ ದಿನಾಂಕವನ್ನು ಸರಿಪಡಿಸುವ ಬಗ್ಗೆ.

**ಓದಲಾಗಿದೆ :** 1) ಅಧಿಕಾರಿಯವರ ಮನವಿ ದಿನಾಂಕ 13–07–2009.

2) ಇದೇ ಸಂಖ್ಯೆಯ ದಿನಾಂಕ 23–10–2009ರ ಆದೇಶ.

3) ವಿಚಾರಣಾಧಿಕಾರಿಗಳು ಹಾಗೂ ಸರ್ಕಾರದ ಅಪರ ಕಾರ್ಯದರ್ಶಿಗಳು–3, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರ ದಿನಾಂಕ 09–02–2010ರ ತೀರ್ಪು.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಕೆ.ಎ. ಹಿದಾಯತ್ತುಲ್ಲ, ಶಾಖಾಧಿಕಾರಿ, ಸಿಆಸು ಇಲಾಖೆ (ರಾಜಕೀಯ), ಕರ್ನಾಟಕ ಸರ್ಕಾರದ ಸಚಿವಾಲಯ, ಇವರು ಈ ಹಿಂದೆ ಪ್ರಥಮ ದರ್ಜೆ ಸಹಾಯಕರಾಗಿ ಸಿಟಿ ಸಿವಿಲ್ ಕೋರ್ಟ್ ನ್ಯಾಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ತಮ್ಮ ಜನ್ಮ ದಿನಾಂಕವನ್ನು ತಪ್ಪಾಗಿ ನಮೂದಿಸಿದ್ದು, ಅದನ್ನು ಸರಿಪಡಿಸುವ ಕುರಿತು ಮನವಿಯನ್ನು ಸಲ್ಲಿಸಿದ್ದು, ನ್ಯಾಯಾಂಗ ಇಲಾಖೆಯ ವತಿಯಿಂದ ಪರಿಶೀಲಿಸುವ ಹಂತದಲ್ಲಿ ತಾವು ಸಚಿವಾಲಯದಲ್ಲಿ ಶಾಖಾಧಿಕಾರಿಯಾಗಿ ಆಯ್ಕೆ ಹೊಂದಿ ನೇಮಕಗೊಂಡಿದ್ದರಿಂದ ಹಾಗೂ ಹಾಲಿ ಪ್ರಕರಣದಲ್ಲಿ ಸಕ್ಷಮ

ಪ್ರಾಧಿಕಾರ ಕರ್ನಾಟಕ ಸರ್ಕಾರ ಸಚಿವಾಲಯ ಆಗಿದ್ದರಿಂದ ಈ ಬಗ್ಗೆ ಮುಂದಿನ ಕ್ರಮ ತೆಗೆದುಕೊಂಡು ಸೂಕ್ತ ಹಿಂಬರಹ ನೀಡಲು ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ (ವಿಜಿಲಿಯನ್ಸ್) ರವರು ಸಿಟಿ ಸಿವಿಲ್ ಕೋರ್ಟ್, ಬೆಂಗಳೂರು ಇವರಿಗೆ ತಿಳಿಸಿದ್ದು, ಈ ದಿಸೆಯಲ್ಲಿ ರಿಜಿಸ್ಟ್ರಾರ್ ಸಿಟಿ ಸಿವಿಲ್ ಕೋರ್ಟ್, ಬೆಂಗಳೂರು ಇವರು ಶ್ರೀ ಕೆ.ಎ. ಹಿದಾಯತ್ತುಲ್ಲ, ಇವರಿಗೆ ಹಿಂಬರಹ ನೀಡಿದ್ದು, ಸದರಿ ಹಿಂಬರಹವನ್ನು ಲಗತ್ತಿಸಿ ಸಲ್ಲಿಸುತ್ತಾ, ತಮ್ಮ ಜನ್ಮ ದಿನಾಂಕವನ್ನು ಸರಿಪಡಿಸುವ ಕುರಿತು ಕೋರಿಕೆಯನ್ನು ಸಲ್ಲಿಸಿರುತ್ತಾರೆ.

ಈ ವಿಷಯದ ಕುರಿತು ವಿಚಾರಣೆಯನ್ನು ನಡೆಸಲು The Karnataka State Service (Determination of Age) Act, 1974 ರ Section 5(3) ಅನುಸಾರ ಸರ್ಕಾರದ ಅಪರ ಕಾರ್ಯದರ್ಶಿ–3, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ನೇಮಕ ಮಾಡಲಾಗಿತ್ತು.

ಮೇಲೆ ಕ್ರಮಸಂಖ್ಯೆ (3) ರಲ್ಲಿ ಓದಲಾದ ತೀರ್ಪಿನಲ್ಲಿ, ವಿಚಾರಣಾಧಿಕಾರಿಗಳು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

"ಶ್ರೀ ಕೆ.ಎ. ಹಿದಾಯುತ್ತುಲ್ಲ, ಶಾಖಾಧಿಕಾರಿ, ಸಿಆಸು ಇಲಾಖೆ (ರಾಜಕೀಯ) ಇವರ ಜನ್ಮ ದಿನಾಂಕವು 25–04–1978 ಇರುತ್ತದೆ ಎಂದು ನಿರ್ಧರಿಸಲಾಗಿರುತ್ತದೆ. ಅದರಂತೆ ಸದರಿಯವರ ಜನ್ಮ ದಿನಾಂಕವನ್ನು 25–04–1978 ಎಂದು ಅವರ ಸೇವಾ ಪುಸ್ತಕದಲ್ಲಿ ನಮೂದಿಸಿ 25–04–1976 ಎಂದು ನಮೂದಾಗಿರುವ ಜಾಗದಲ್ಲಿ 25–04–1978 ಎಂದು ತಿದ್ದುಪಡಿ ಮಾಡುವುದು".

ಮೇಲಿನ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ ಸಿಆಸುಇ 259 ಸಿಶಾಸೇ 2009, ಬೆಂಗಳೂರು, ದಿನಾಂಕ 12ನೇ ಏಪ್ರಿಲ್ 2010**

ಮೇಲ್ಕಂಡ ಹಿನ್ನಲೆಯಲ್ಲಿ ಶ್ರೀ ಕೆ.ಎ. ಹಿದಾಯತ್ತುಲ್ಲ, ಶಾಖಾಧಿಕಾರಿ, ಸಿಆಸು ಇಲಾಖೆ (ರಾಜಕೀಯ), ಕರ್ನಾಟಕ ಸರ್ಕಾರದ ಸಚಿವಾಲಯ, ಇವರ ಸೇವಾ ಪುಸ್ತಕದಲ್ಲಿ ನಮೂದಾಗಿರುವ ಜನ್ಮ ದಿನಾಂಕವು 25–04–1976 ಎಂಬುದರ ಬದಲಾಗಿ 25–04–1978 ಎಂದು ಬದಲಾವಣೆ ಮಾಡಲು ಕರ್ನಾಟಕ ನಾಗರೀಕ ಸೇವಾ (ವಯಸ್ಸು ನಿರ್ಧರಣಾ) ಕಾಯ್ದೆ 1974ರ ನಿಯಮ 5(1) ರಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1000

**(ಎಸ್.ಎನ್. ಕೃಷ್ಣಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ 'ಎ ಗುಂಪಿನ' ವೇತನ ಶ್ರೇಣಿ ರೂ. 20025–28275 ಹೊಂದಿರುವ ಜಂಟಿ ನಿರ್ದೇಶಕರುಗಳಿಗೆ ಆಯ್ಕೆ ದರ್ಜೆ ವೇತನ ಶ್ರೇಣಿ ರೂ. 22125–30300 ನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 2007 (X) ದಿನಾಂಕ 14.8.2008.
2. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/88/ 2008–09 ದಿ: 31.01.2009 ಹಾಗೂ ದಿ: 12.08.2009
3. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/88/ 2009–10 ದಿ: 21.01.2010.
4. ದಿ. 10.12.2009 ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಡವಳಿಗಳು
5. ಮಹಾಲೇಖಪಾಲರಿಗೆ ವಿಳಾಸಿಸಿದ ಸರ್ಕಾರದ ಪತ್ರ ಸಂಖ್ಯೆ: ವಾಕೈ 46 ಕೈಸೇವಿ 2009 ದಿ: 23.02.2010.

**ಪ್ರಸ್ತಾವನೆ :**

1. ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ರೂ. 20025–28275 ವೇತನ ಶ್ರೇಣಿಯಲ್ಲಿರುವ ಎ ಗುಂಪಿನ ಅಧಿಕಾರಿಗಳಿಗೆ ರೂ. 22125–30300 ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಕೆಲವು ನಿಬಂಧನೆಗಳಿಗೊಳಪಟ್ಟಂತೆ ಮಂಜೂರು ಮಾಡಲು ಆದೇಶಿಸಿಸಲಾಗಿರುತ್ತದೆ.

2. ಮೇಲೆ ಓದಲಾದ (2) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಎ ಗುಂಪಿನ ರೂ. 20025–28275 ರ ವೇತನ ಶ್ರೇಣಿಯ ಜಂಟಿ ನಿರ್ದೇಶಕರಿಗೆ ರೂ. 22125–30300 ರ ಆಯ್ಕೆ ದರ್ಜೆ ವೇತನ ಶ್ರೇಣಿ ಸೌಲಭ್ಯವನ್ನು ಮಂಜೂರು ಮಾಡಲು ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.
3. ಮೇಲೆ ಓದಲಾದ (3) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಜಂಟಿ ನಿರ್ದೇಶಕ ಹುದ್ದೆಯಲ್ಲಿ ಆರು ವರ್ಷಗಳ ಸೇವೆಯನ್ನು ಪೂರೈಸಿರುವ ಅಧಿಕಾರಿಗಳ ಪಟ್ಟಿ ಹಾಗೂ ಸೇವಾ ವಿವರಗಳನ್ನು ಒದಗಿಸಿ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 2007 (X) ದಿ 14.08.2008 ರನ್ವಯ ಅರ್ಹ ಅಧಿಕಾರಿಗಳಿಗೆ ಆಯ್ಕೆ ದರ್ಜೆ ವೇತನ ಶ್ರೇಣಿ ಮಂಜೂರಾತಿಗೆ ಸರ್ಕಾರದ ಹಂತದಲ್ಲಿ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.
4. ಮೇಲೆ ಓದಲಾದ (4) ರ ನಡವಳಿಯಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಂಟಿ ನಿರ್ದೇಶಕರುಗಳಿಗೆ ರೂ. 20025–28275 ರ ವೇತನ ಶ್ರೇಣಿಯಿಂದ ರೂ. 22125–30300 ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಸರ್ಕಾರಿ ಆದೇಶ ಸಂಖ್ಯೆ FD 31 SRP 2007 (X) ದಿ: 14.08.2008 ರಲ್ಲಿ ವಿಧಿಸಲಾಗಿರುವ ಷರತ್ತು ಮತ್ತು ನಿಬಂಧನೆಗಳನುಸಾರ ಮಂಜೂರು ಮಾಡಬಹುದೆಂದು ನಿರ್ಧರಿಸಲಾಗಿರುತ್ತದೆ.
5. ಮೇಲೆ ಓದಲಾದ (5) ರ ಪತ್ರದಲ್ಲಿ ಆಯ್ಕೆ ದರ್ಜೆ ವೇತನ ಶ್ರೇಣಿ ಮಂಜೂರಾತಿಗೆ ಪರಿಗಣನೆಯಲ್ಲಿರುವ ಅಧಿಕಾರಿಗಳ ಪಟ್ಟಿಯನ್ನು ಒದಗಿಸಿ ಸದರಿ ಅಧಿಕಾರಿಗಳು ಸರ್ಕಾರದ ಆದೇಶ ಸಂಖ್ಯೆ : FD 31 SRP 2007 (X) ದಿ: 14.08.2008 ರ ಕಂಡಿಕೆ 4 ರಲ್ಲಿ ನಮೂದಿಸಲಾಗಿರುವಂತೆ – ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿ. ಹಿರಿಯ ವೇತನ ಶ್ರೇಣಿ ಹಾಗೂ ಹೆಚ್ಚುವರಿ ವೇತನ ಬಡ್ತಿ ಪಡೆದಿರುವುದಿಲ್ಲವೆಂದು ಖಚಿತಪಡಿಸಲು ಕೋರಲಾಗಿರುತ್ತದೆ. (ಕನ್ನಡ ಭಾಷಾ ಪರೀಕ್ಷೆಗಾಗಿ ನೀಡಲಾದ ಅಥವಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಕಾರಣಕ್ಕಾಗಿ ನೀಡಲಾದ ಹೆಚ್ಚುವರಿ ಬಡ್ತಿಯು ಆಯ್ಕೆ ಕಾಲಿಕ ವೇತನ ಶ್ರೇಣಿ ಮಂಜೂರಾತಿಗೆ ಅಡ್ಡಿ ಉಂಟು ಮಾಡುವುದಿಲ್ಲವೆಂದು ಆರ್ಥಿಕ ಇಲಾಖೆಯ ಹಿಂಬರಹದಲ್ಲಿ ಸ್ಪಷ್ಟಪಡಿಸಲಾಗಿರುತ್ತದೆ).
6. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಂಟಿ ನಿರ್ದೇಶಕರುಗಳು ಕೆ.ಪಿ.ಎಸ್.ಸಿ. ಮೂಲಕ ಸಹಾಯಕ ನಿರ್ದೇಶಕರಾಗಿ ನೇರ ನೇಮಕಾತಿ ಹೊಂದಿ ತದನಂತರ ಉಪ/ಜಂಟಿ ನಿರ್ದೇಶಕರಾಗಿ ಮುಂಬಡ್ತಿ ಹೊಂದಿರುತ್ತಾರೆ. ಇವರು ಸಮೂಹ ಎ ಗುಂಪಿನ ವೇತನ ಶ್ರೇಣಿ ರೂ. 20025–28275 ರ ಜಂಟಿ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ಪಡೆದಿದ್ದು, ಈ ಹುದ್ದೆಯಲ್ಲಿ 6 ವರ್ಷಗಳ ಸೇವೆಯನ್ನು ಪೂರೈಸಿರುತ್ತಾರೆ. ಇಲಾಖೆಯ ಜಂಟಿ ನಿರ್ದೇಶಕರ ಹುದ್ದೆಯು ಆಯ್ಕೆ ಕಾಲಿಕ ದರ್ಜೆಯ ಹುದ್ದೆಯಾಗಿರುವುದಿಲ್ಲ. ಎರಡನೆಯದಾಗಿ, ಈ ಅಧಿಕಾರಿಗಳು ತೃಪ್ತಿಕರವಾದ ಸೇವಾ ದಾಖಲೆಗಳನ್ನು ಹೊಂದಿರುವ ಬಗ್ಗೆ. ನೇಮಕಾತಿ ನಿಯಮಗಳಲ್ಲಿ ಪದೋನ್ನತಿಗಾಗಿ ನಿಗದಿಪಡಿಸಿರುವ ಅರ್ಹತೆಯನ್ನು ಹೊಂದಿರುವ ಬಗ್ಗೆ ಹಾಗೂ ಕಛೇರಿಯ ದಾಖಲೆಗಳ ಮೇರೆಗೆ ಯಾವುದೇ ಆಯ್ಕೆ ಕಾಲಿಕ ವೇತನ ಶ್ರೇಣಿ/ ಹಿರಿಯ ವೇತನ ಶ್ರೇಣಿ/ ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡಿರುವುದಿಲ್ಲವೆಂದು ಕೈಗಾರಿಕಾ ನಿರ್ದೇಶನಾಲಯದ ನಮೂನೆಯಲ್ಲಿ ನಮೂದಿಸಲಾಗಿರುವುದನ್ನು ಗಮನಿಸಲಾಗಿದೆ. ಸಂಬಂಧಿತ ಅಧಿಕಾರಿಗಳು ಸಲ್ಲಿಸಿರುವ ವೈಯಕ್ತಿಕ ಮನವಿಯಲ್ಲಿ ಸಹ ಈ ಬಗ್ಗೆ ಮುಚ್ಚಳಿಕೆ ನೀಡಿರುತ್ತಾರೆ.
7. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವೇತನ ಶ್ರೇಣಿ ರೂ. 20025–28275 ಹೊಂದಿರುವ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಂಟಿ ನಿರ್ದೇಶಕರುಗಳು ಆಯ್ಕೆ ದರ್ಜೆ ವೇತನ ಶ್ರೇಣಿ ರೂ. 22125–30300 ಗಳನ್ನು ಪಡೆಯಲು ಅರ್ಹರಾಗಿರುತ್ತಾರೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 46 ಕೈಸೇವಿ 2009, ಬೆಂಗಳೂರು, ದಿನಾಂಕ 12ನೇ ಏಪ್ರಿಲ್ 2010**.

8. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಸಮೂಹ ಎ ಗುಂಪಿನ ಈ ಕೆಳಕಂಡ ಜಂಟಿ ನಿರ್ದೇಶಕರುಗಳಿಗೆ ರೂ. 20025–28275 ರ ವೇತನ ಶ್ರೇಣಿಯಿಂದ ರೂ. 22125–30300 ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಆಯ್ಕೆ ಕಾಲಿಕ ವೇತನ ಶ್ರೇಣಿಗೆ ಅರ್ಹರಾದ ದಿನಾಂಕದಿಂದ ಜಾರಿಗೆ ಬರುವಂತೆ ಮಂಜೂರು ಮಾಡಿದೆ.

| ಕ್ರ. ಸಂ. | ಜಂಟಿ ನಿರ್ದೇಶಕರ ಹೆಸರು | ಸಹಾಯಕ ನಿರ್ದೇಶಕರಾಗಿ ಸೇವೆಗೆ ಸೇರಿದ ದಿನಾಂಕ | ಜಂಟಿ ನಿರ್ದೇಶಕರಾಗಿ ಬಡ್ತಿ ಹೊಂದಿದ ದಿನಾಂಕ | ಜಂಟಿ ನಿರ್ದೇಶಕ ಹುದ್ದೆಯಲ್ಲಿ ಆರು ವರ್ಷಗಳ ಸೇವಾವಧಿ ಪೂರೈಸಿದ ದಿನಾಂಕ | ಆಯ್ಕೆ ಕಾಲಿಕ ವೇತನ ಶ್ರೇಣಿಗೆ ಅರ್ಹರಾದ ದಿನಾಂಕ |
|---|---|---|---|---|---|
| | ಶ್ರೀ/ಶ್ರೀಮತಿ | | | | |
| 1 | ಎಸ್.ಟಿ.ಪರಮೇಶ್ವರಪ್ಪ | 18.06.82 | 11.11.95 | 10.11.2001 | 01.08.2008 |
| 2 | ಕೆ.ಎಸ್. ಶಿವಸ್ವಾಮಿ | 16.08.82 | 09.08.95 | 08.08.2001 | 01.08.2008 |
| 3 | ಜಿ. ನಾರಾಯಣರಾಜು | 16.08.82 | 09.08.95 | 08.08.2001 | 01.08.2008 |

| | | | | | |
|---|---|---|---|---|---|
| 4 | ಎಂ.ಎ. ಹುಸೇನ್ | 16.08.82 | 13.02.96 | 12.02.2002 | 01.08.2008 |
| 5 | ಜಿ. ರಂಗರಾಮು | 02.09.82 | 20.08.96 | 19.08.2002 | 01.08.2008 |
| 6 | ಡಾ॥ ಎಂ.ಎನ್. ಕರೂರ್ | 16.08.82 | 20.08.96 | 19.08.2002 | 01.08.2008 |
| 7 | ಎಂ. ಪ್ರಭು | 16.08.82 | 20.08.96 | 19.08.2002 | 01.08.2008 |
| 8 | ಎನ್. ಚಂದ್ರಶೇಖರ್ | 16.08.82 | 15.07.98 | 14.07.2004 | 01.08.2008 |
| 9 | ಬಿ.ಪಿ. ಶ್ರೀನಿವಾಸ್ | 16.08.82 | 15.07.98 | 14.07.2004 | 01.08.2008 |
| 10 | ಜಿ.ಎಸ್. ಕುಲಕರ್ಣಿ | 31.08.82 | 15.07.98 | 14.07.2004 | 01.08.2008 |
| 11 | ಹೆಚ್. ಪ್ರಕಾಶ್ | 16.08.82 | 18.07.2002 | 17.07.2008 | 01.08.2008 |
| 12 | ಕೆ.ಜೆ. ಸುರೇಶ್ | 16.08.82 | 18.07.2002 | 17.07.2008 | 01.08.2008 |
| 13 | ಎಂ. ಸುಜ್ಞಾನ ಮೂರ್ತಿ | 20.08.82 | 18.07.2002 | 17.07.2008 | 01.08.2008 |
| 14 | ಕೆ.ಎ. ಜಯಾನಂದ | 16.08.82 | 18.07.2002 | 17.07.2008 | 01.08.2008 |
| 15 | ಪಿ. ಪ್ರಭುದೇವ್ | 16.08.82 | 18.07.2002 | 17.07.2008 | 01.08.2008 |
| 16 | ಜಿ.ಎಸ್. ಬಾಬುಸಿದ್ದ ಕುಮಾರ್ | 16.08.82 | 18.07.2002 | 17.07.2008 | 01.08.2008 |
| 17 | ಎಂ.ವಿ. ಹೇಮಂತ್ ಕುಮಾರ್ | 16.08.82 | 18.07.2002 | 17.07.2008 | 01.08.2008 |
| 18 | ಹೆಚ್. ರಾಮಕೃಷ್ಣಗೌಡ | 16.08.82 | 18.07.2002 | 17.07.2008 | 01.08.2008 |
| 19 | ಕೋಮಲ | 16.08.82 | 18.07.2002 | 17.07.2008 | 01.08.2008 |
| 20 | ಎಂ.ಜೆ. ಜೀವಣ್ಣವರ್ | 16.08.82 | 09.09.2002 | 08.09.2008 | 09.09.2008 |
| 21 | ಎಸ್.ಜಿ. ಹೆಗಡೆ | 31.05.82 | 01.10.2003 | 30.09.2009 | 01.10.2009 |
| 22 | ಕೆ.ಐ. ಗುದಗಿ | 16.08.82 | 01.10.2003 | 30.09.2009 | 01.10.2009 |
| 23 | ಎಂ.ಎಲ್. ಹಾಲಳ್ಳಿ | 11.09.82 | 01.10.2003 | 30.09.2009 | 01.10.2009 |

**9. ಷರತ್ತು ಮತ್ತು ನಿಬಂಧನೆಗಳು:**

(i) ಮೇಲ್ಕಂಡ ಜಂಟಿ ನಿರ್ದೇಶಕರುಗಳ ವೇತನವನ್ನು ಈ ಆದೇಶದನ್ವಯ ಮಂಜೂರು ಮಾಡಲಾಗಿರುವ ಆಯ್ಕೆ ದರ್ಜೆ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ರ ನಿಯಮ 42 (ಬಿ) ರಲ್ಲಿ ಕಲ್ಪಿಸಿರುವ ಅವಕಾಶಗಳನ್ವಯ ನಿಗದಿಪಡಿಸತಕ್ಕದ್ದು.

(ii) ಮೇಲ್ಕಂಡ ಜಂಟಿ ನಿರ್ದೇಶಕರುಗಳಿಗೆ ರೂ. 20025–28275 ರ ವೇತನ ಶ್ರೇಣಿಯಿಂದ ರೂ. 22125–30300 ರ ಆಯ್ಕೆ ದರ್ಜೆ ವೇತನ ಶ್ರೇಣಿ ನೀಡಿ authorization slip ಹೊರಡಿಸುವ ಮುನ್ನ ಆಯಾ ಅಧಿಕಾರಿಗಳ ಸೇವಾ ದಾಖಲೆಗಳ ಮೇರೆಗೆ ಯಾವುದೇ ಹುದ್ದೆಯಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿ/ ಕಾಲಮಿತಿ ವೇತನ/ ಹಿರಿಯ ವೇತನ ಶ್ರೇಣಿ ಹಾಗೂ ಹೆಚ್ಚುವರಿ ವೇತನ ಬಡ್ತಿ ಪಡೆದಿರುವುದಿಲ್ಲವೆಂದು ಖಚಿತಪಡಿಸಿಕೊಂಡು authorization slip ಬಿಡುಗಡೆಗೊಳಿಸತಕ್ಕದ್ದು.

(iii) ಈ ಸರ್ಕಾರಿ ಆದೇಶದನ್ವಯ ಆಯ್ಕೆ ದರ್ಜೆ ವೇತನ ಶ್ರೇಣಿ ಸೌಲಭ್ಯವನ್ನು ಮಂಜೂರು ಮಾಡಲು ನೇಮಕಾತಿ ಪ್ರಾಧಿಕಾರವು ಸಕ್ಷಮವಾಗಿರುತ್ತದೆ.

(iv) ಈ ಆದೇಶದ ಸಂಬಂಧ ಸರ್ಕಾರದ ಪತ್ರ ಸಂಖ್ಯೆ: ವಾಕೈ 46 ಕೈಸೇವಿ 2009 ದಿ: 23.02.2010 ಕುರಿತಂತೆ ಮಹಾಲೇಖಪಾಲರು ಒದಗಿಸಿರುವ ದೃಢೀಕರಣ ಪ್ರಮಾಣ ಪತ್ರಕ್ಕೆ ಅಧಿಕಾರಿಗಳು ಬದ್ಧರಾಗಿರುತ್ತಾರೆ.

(v) Irrespective of this order, inter se seniority of the officers shall be governed by KCS (Seniority) Rule, 1957 only.

(vi) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 46 ಸೇ–2/2010 ದಿ: 11.02.2010 ಹಾಗೂ ಸರ್ಕಾರದ ಆದೇಶ ಸಂಖ್ಯೆ: FD 31 SRP 2007 (x) ದಿ: 14.08.2008 ರಲ್ಲಿ ಸಕ್ಷಮ ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1001

**(ಬಿ.ಸಿ. ಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಬಿ. ರಮೇಶ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ. ಇವರ ನೇಮಕಾತಿ ನಿರೀಕ್ಷಣೆಯ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 182 ಕೈಸೇವಿ 2007, ದಿನಾಂಕ 28.02.2009.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 268 ಕೈಸೇವಿ 2008, ದಿನಾಂಕ 13–03–2009
3. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 63 ಕೈಸೇವಿ 2009, ದಿನಾಂಕ 20.07.2009.
4. ಇಂಧನ ಇಲಾಖೆಯ ಅಧಿಸೂಚನೆ ಸಂಖ್ಯೆ ಇಎನ್ 205 ಎನ್‌ಸಿಇ 2009. ದಿನಾಂಕ 05–08–2009.
5. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 65 ಕೈಸೇವಿ 2009, ದಿನಾಂಕ 11.09.2009.
6. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 65 ಕೈಸೇವಿ 2009, ದಿನಾಂಕ 16–09–2009.
7. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/99/2009–10. ದಿನಾಂಕ 17.09.2009.
8. ಸರ್ಕಾರದ ಆದೇಶ ಸಂಖ್ಯೆ: ವಾಕೈ65 ಕೈಸೇವಿ 2009. ದಿನಾಂಕ 08–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಸ್ವಂತ ಕೋರಿಕೆ ಮೇರೆಗೆ ಶ್ರೀ ಬಿ. ರಮೇಶ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇರೆಗೆ ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಐ.ಎಂ.ಸಿ., ಬೆಂಗಳೂರು. ಇವರ ಸೇವೆಯನ್ನು ಸಮಾನಾಂತರ ಹುದ್ದೆಗೆ ನೇಮಿಸಲು ಇಂಧನ ಇಲಾಖೆಯ ವಶಕ್ಕೆ ನೀಡಲಾಗಿದ್ದಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅಧಿಸೂಚನೆಯಲ್ಲಿ ಮತ್ತೋರ್ವ ಅಧಿಕಾರಿಗಳನ್ನು MD, KSIMC ಹುದ್ದೆಯ ಅಧಿಕ ಪ್ರಭಾರದಲ್ಲಿರಿಸಲಾಗಿದ್ದರಿಂದ ಶ್ರೀ ಬಿ. ರಮೇಶ್ ರವರು ಕೆ.ಎಸ್.ಐ.ಎಂ.ಸಿ.ಯಿಂದ ದಿನಾಂಕ 13–03–2009 ರಂದು ಬಿಡುಗಡೆಹೊಂದಿ ಅದೇ ದಿನ ಸಚಿವಾಲಯದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ವರದಿಸಿಕೊಂಡಿರುತ್ತಾರೆ. ತದನಂತರ ಹೊರಡಿಸಲಾದ ಮೇಲೆ ಓದಲಾದ (3) ರ ಅಧಿಸೂಚನೆಯಲ್ಲಿ ಉಲ್ಲೇಖ (1)ರ ಅಧಿಸೂಚನೆಯನ್ನು ರದ್ದುಗೊಳಿಸಿ ಸದರಿಯವರನ್ನು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್, ಹುದ್ದೆಗೆ ನೇಮಿಸಲಾಗಿದ್ದಿತು. ಈ ಆದೇಶವನ್ನು ಪಾಲಿಸದೇ ಅಧಿಕಾರಿಯವರು ಇಂಧನ ಇಲಾಖೆ ಹೊರಡಿಸಿರುವ ಉಲ್ಲೇಖ (4)ರ ಅಧಿಸೂಚನೆ ರೀತ್ಯಾ ದಿನಾಂಕ 06–08–2009 ರಂದು ಪೂರ್ವಾಹ್ನ ಇಂಧನ ಇಲಾಖೆಯಲ್ಲಿ ಸ್ವಇಚ್ಛೆ ಮೇರೆಗೆ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಈ ಮಧ್ಯೆ ಉಲ್ಲೇಖ (5) ರ ಅಧಿಸೂಚನೆಯಲ್ಲಿ ಸದರಿಯವರ ಸೇವೆಯನ್ನು ಮಾತೃ ಇಲಾಖೆಗೆ ಹಿಂಪಡೆಯಲಾಗಿದ್ದಿತು. ಇಲಾಖೆಯ ಆದೇಶಕ್ಕೆ ಉಲ್ಲಂಘನೆಯ ಕಾರಣಕ್ಕಾಗಿ ಸದರಿಯವರನ್ನು ಮೇಲೆ ಓದಲಾದ(6) ರ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದ್ದಿತು. ತದನಂತರ ಇಂಧನ ಇಲಾಖೆಯ ಕೋರಿಕೆಯ ಮೇರೆಗೆ ಮೇಲೆ ಓದಲಾದ (8) ರ ಆದೇಶದಲ್ಲಿ ಉಲ್ಲೇಖಿತ (5) ಹಾಗೂ (6) ಆದೇಶಗಳನ್ನು ಹಿಂಪಡೆದು ಸದರಿಯವರನ್ನು ಇಂಧನ ಇಲಾಖೆಯಲ್ಲಿ ಮುಂದುವರೆಸಲಾಗಿರುತ್ತದೆ.

ಅಧಿಕಾರಿಗಳು ದಿನಾಂಕ 14–03–2009ರಿಂದ 05–08–2009ರವರೆಗಿನ ಅವಧಿಯನ್ನು ಕಡ್ಡಾಯ ಕಾಯುವಿಕೆಯೆಂದು ಪರಿಗಣಿಸಲು ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 226 ಕೈಸೇವಿ 2009, ಬೆಂಗಳೂರು, ದಿನಾಂಕ 12ನೇ ಏಪ್ರಿಲ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ. ರಮೇಶ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ. ನಿಯೋಜನೆ ಮೇರೆಗೆ ವಿಶೇಷಾಧಿಕಾರಿ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು, ಇವರಿಗೆ ದಿ: 14–03–2009 ರಿಂದ 05–08–2009ರ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸಿ ಮಂಜೂರು ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1002

**(ಬಿ.ಸಿ. ಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

ಆರ್ಥಿಕ ಸಚಿವಾಲಯ

**ವಿಷಯ :** ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು 5ನೇ ರಾಜ್ಯ ವೇತನ ಆಯೋಗವು ಮಾಡಿರುವ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 8 ಎಸ್‌ಆರ್‌ಪಿ 07 ದಿನಾಂಕ 16.05.2007.
2. ಸರ್ಕಾರಿ ಅಧಿಸೂಚನೆ ಸಂಖ್ಯೆ:ಎಫ್‌ಡಿ 17 ಎಸ್‌ಆರ್‌ಪಿ 07 ದಿನಾಂಕ 16.05.2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 16–5–2007ರ ಸರ್ಕಾರಿ ಆದೇಶದಲ್ಲಿ 5 ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸಿನ ಮೇರೆಗೆ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ದಿನಾಂಕ 1–7–2005 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

5ನೇ ರಾಜ್ಯ ವೇತನ ಆಯೋಗವು ಸಲ್ಲಿಸಿರುವ ತನ್ನ ಅಂತಿಮ ವರದಿಯಲ್ಲಿನ 2ನೇ ಸಂಪುಟದಲ್ಲಿ ಕೆಲವೊಂದು ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು ಶಿಫಾರಸ್ಸು ಮಾಡಿದೆ. ವೇತನ ಆಯೋಗವು ಮಾಡಿರುವ ಶಿಫಾರಸ್ಸನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 20 ಎಸ್‌ಆರ್‌ಪಿ 2010 ಬೆಂಗಳೂರು, ದಿನಾಂಕ: 3ನೇ ಜೂನ್ 2010**

2007ರ ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳ ನಿಯಮ 4ರ ಉಪ–ನಿಯಮ (2)ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕೆಳಗಿನ ಪಟ್ಟಿಯ ಅಂಕಣ (3)ರಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳಿಗೆ ಅನ್ವಯವಾಗುವ ವೇತನ ಶ್ರೇಣಿಯನ್ನು ಪಟ್ಟಿಯಲ್ಲಿನ ಅಂಕಣ (4)ರಲ್ಲಿ ನಮೂದಿಸಿರುವ ಪರಿಷ್ಕೃತ ವೇತನ ಶ್ರೇಣಿಗೆ ಬದಲಾಗಿ ಅಂಕಣ (5)ರಲ್ಲಿ ನಮೂದಿಸಿರುವ ಸಂವಾದಿ ವೇತನ ಶ್ರೇಣಿ ಆಗಿರತಕ್ಕದ್ದೆಂದು ಈ ಮೂಲಕ ಆದೇಶಿಸಿದೆ.

| ಕ್ರಮ ಸಂಖ್ಯೆ | ಇಲಾಖೆ | ಹುದ್ದೆ | ಪ್ರಸ್ತುತ 2007ರ ವೇತನ ಶ್ರೇಣಿ ರೂ. | ಪರಿಷ್ಕೃತ 2007ರ ವೇತನ ಶೇಣಿ ರೂ. |
|---|---|---|---|---|
| **(1)** | **(2)** | **(3)** | **(4)** | **(5)** |
| **1** | ಪೌರಾಡಳಿತ | ಸಮುದಾಯ ಸಂಘಟಕರು | 5800–10500 | 7275––13350 |
| **2** | | ಸಮುದಾಯ ಸಂಘಟನಾಧಿಕಾರಿಗಳು | 7275–13350 | 10800–20025 |

**2.** ಈ ಆದೇಶದ ಮೂಲಕ ಮಂಜೂರು ಮಾಡಲಾದ ಪರಿಷ್ಕೃತ ವೇತನ ಶ್ರೇಣಿಗಳು ತಕ್ಷಣದಿಂದ ಜಾರಿಗೆ ಬರುತ್ತವೆ.

3. ಮೇಲಿನ ಪಟ್ಟಿಯಲ್ಲಿ ನಮೂದಿಸಿರುವ ಹುದ್ದೆಗಳನ್ನು ಧಾರಣ ಮಾಡಿರುವ ನೌಕರರ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 43ರಲ್ಲಿ ಕಲ್ಪಿಸಿರುವ ಅವಕಾಶಗಳ ಅನುಸಾರ ನಿಗದಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1416

**(ಸುಂದರ ರಾಜ ಗುಪ್ತ)**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ, (ಸೇವೆಗಳು–2)